ಒಳಬದಿಯ ರಕ್ಷಾಪುಟದಲ್ಲಿ ಕಾಣಿಸಿರುವ ಶಿಲ್ಪಕಲೆಯಲ್ಲಿ ಮೂವರು ಭವಿಷ್ಯವಾದಿಗಳು ಭಗವಾನ್ ಬುದ್ಧನ ತಾಯಿ ರಾಣಿ ಮಾಯಾಳ ಕನಸನ್ನು ರಾಜ ಶುದ್ಧೋದನನಿಗೆ ವಿವರಿಸುವ ದೃಶ್ಯವಿದೆ. ಕೆಳಗೆ ಆ ವಿವರಣೆಯನ್ನು ಬರೆದುಕೊಳ್ಳುತ್ತಿರುವ ಬರಹಗಾರ ಕುಳಿತಿದ್ದಾನೆ. ಬಹುಶಃ ಇದುವೇ ಭಾರತದ ಬರವಣಿಗೆಯ ಕಲೆಯನ್ನು ಕುರಿತ ಪ್ರಥಮ ಚಾರಿತ್ರಿಕ ದಾಖಲೆಯಾಗಿದೆ.

ಸ್ಥಳ : ನಾಗಾರ್ಜುನಕೊಂಡ-ಕ್ರಿ.ಶ. ಎರಡನೆಯ ಶತಮಾನ

ಕೃಪೆ : ನ್ಯಾಷನಲ್ ಮ್ಯೂಸಿಯಂ, ನವದೆಹಲಿ

ಭಾರತೀಯ ಸಾಹಿತ್ಯದ ನಿರ್ಮಾಣಕಾರರು

# ನಾಮಕ್ಕಲ್ ರಾಮಲಿಂಗಮ್ ಪಿಳ್ಳೈ

ಲೇಖಕರು :

ಕೆ. ಆರ್. ಹನುಮಂತನ್

ಭಾಷಾಂತರ :

ವಿ. ಗೋಪಾಲಕೃಷ್ಣ



ಸಾಹಿತ್ಯ ಅಕಾದೆಮಿ

*NAMAKKAL RAMALINGAM PILLAI* - Kannada translation by V. Gopalakrishna of K. R. Hanumanthan's monograph of the same title. Sahitya Akademi, New Delhi, 1993
Rs. 15

ISBN 81-7201-441-4


First Edition : 1993

**ಸಾಹಿತ್ಯ ಅಕಾದೆಮಿ**

**ಪ್ರಧಾನ ಕಾರ್ಯಾಲಯ :**

ರವೀಂದ್ರ ಭವನ, ೩೫, ಫಿರೋಜ್‌ಷಹಾ ರಸ್ತೆ, ನವದೆಹಲಿ-೧೧೦ ೦೦೧

'ಸ್ವಾತಿ', ಮಂದಿರ್ ಮಾರ್ಗ, ನವದೆಹಲಿ-೧೧೦ ೦೦೧

೧೦೯, ಜೆ.ಸಿ. ರೋಡ್, ಬೆಂಗಳೂರು-೫೬೦ ೦೦೨

ಜೀವನ್‌ತಾರಾ ಬಿಲ್ಡಿಂಗ್, ೪ನೇ ಮಹಡಿ, ಡೈಮಂಡ್ ಹಾರ್ಬರ್ ರೋಡ್
ಕಲ್ಕತ್ತಾ-೭೦೦ ೦೫೩

೧೭೨, ಮುಂಬಯಿ ಮರಾಠಿ ಗ್ರಂಥ ಸಂಗ್ರಹಾಲಯ ಮಾರ್ಗ, ದಾದರ್
ಮುಂಬಯಿ-೪೦೦ ೦೧೪

ಗುಣ ಬಿಲ್ಡಿಂಗ್, ಎರಡನೆಯ ಮಹಡಿ, ೩೦೪-೩೦೫, ಅಣ್ಣಾಸಾಲೈ
ಮದ್ರಾಸ್-೬೦೦ ೦೧೮

ಬೆಲೆ : 15 ರೂ.

ಪಲ್ಲವ ಮುದ್ರಣಾಲಯ, ಬೆಂಗಳೂರು-೫೬೦ ೦೫೩

# ಅನುಕ್ರಮಣಿಕೆ

# ಮುನ್ನುಡಿ

ನವದೆಹಲಿಯ ಸಾಹಿತ್ಯ ಅಕಾದೆಮಿಯ ಕೋರಿಕೆಯಂತೆ ಸಿದ್ಧಪಡಿಸಿರುವ ಈ ಪುಸ್ತಿಕೆಯು ತಮಿಳುನಾಡಿನ ದೇಶಭಕ್ತ ಕವಿ ಪದ್ಮಭೂಷಣ ನಾಮಕ್ಕಲ್ ವಿ. ರಾಮಲಿಂಗಮ್ ಪಿಳ್ಳೆಯವರು ಕವಿ, ಗದ್ಯ ಲೇಖಕ, ವಿಮರ್ಶಕ, ವ್ಯಾಖ್ಯಾನಕಾರ, ಜೀವನ ಚರಿತ್ರಕಾರ ಹಾಗೂ ಅನುವಾದಕರಾಗಿ ನಡೆಸಿದ ಸಾಹಿತ್ಯಕ ಜೀವನವನ್ನು ಓದುಗರಿಗೆ ಪರಿಚಯಿಸುತ್ತದೆ. ಅವರು ಒಬ್ಬ ವೀರ ಸ್ವಾತಂತ್ರ್ಯ ಹೋರಾಟಗಾರರು, ಚತುರ ಕಲಾವಿದರು, ಅಪೂರ್ವ ವಾಗ್ಮಿಗಳು ಅಲ್ಲದೆ ಮಾನವೀಯ ಸಾಮಾಜಿಕ ಕಾರ್ಯಕರ್ತರು. ಸಾಹಿತ್ಯ ಅಕಾದೆಮಿಯು ನಿರ್ಬಂಧಿಸಿರುವ ಸುಮಾರು 80 ಪುಟಗಳ ಪರಿಮಿತಿಯಲ್ಲಿ ಅವರ ಬಹುಮುಖ ವ್ಯಕ್ತಿತ್ವವನ್ನು ಪ್ರಾಮಾಣಿಕವಾಗಿ ವ್ಯಕ್ತಪಡಿಸಲು ಸುಲಭವಲ್ಲ. ಆದರೂ ಓದುಗರಿಗೆ ವ್ಯಕ್ತಿಯ ಮುಖ್ಯ ಸಾಧನೆಗಳನ್ನು ಪರಿಚಯಿಸಲು ಪ್ರಾಮಾಣಿಕ ಪ್ರಯತ್ನ ಇಲ್ಲಿ ಮಾಡಲಾಗಿದೆ. ಪ್ರಸ್ತುತ ಲೇಖಕ ಸ್ವತಃ ದಿವಂಗತ ಕವಿವರ್ಯರ ಅಳಿಯನೇ ಆಗಿರುವುದರಿಂದ ಕವಿವರ್ಯರ ವ್ಯಕ್ತಿತ್ವನನ್ನು ಹೆಚ್ಚು ನಿಕಟವಾಗಿ ತಿಳಿಯಲು ಹಾಗೂ ಅವರ ಗ್ರಂಥಗಳನ್ನು ವೈಯಕ್ತಿಕ ಕಾಗದ ಪತ್ರಗಳನ್ನು ಹುಡುಕಿ ತೆಗೆದುನೋಡುವ ಅವಕಾಶ ದೊರತಿದೆ. ಅವರ ಜೀವನ ಚಿತ್ರಣವನ್ನು ಹಾಗೂ ಸಾಧನೆಗಳನ್ನು ವಿವರಿಸುವಾಗ ಮುಖಸ್ತುತಿಗಾಗಲಿ ಪೂರ್ವಾಗ್ರಹ ಟೀಕೆ ಇತ್ಯಾದಿಗಳಿಂದ ಆದಷ್ಟು ದೂರವಿರಲು ಪ್ರಯತ್ನಿಸಲಾಗಿದೆ.

ಪಿಳ್ಳೆಯವರ ಸಾಹಿತ್ಯ ಕೃತಿಗಳು ಎಷ್ಟು ರಾಷ್ಟ್ರೀಯತೆ ಹಾಗೂ ಗಾಂಧೀವಾದದಿಂದ ತುಂಬಿವೆಯೆಂದರೆ ಅವುಗಳನ್ನು ಪ್ರಾಂತೀಯವೆಂಬುದಕ್ಕಿಂತಲೂ ಹೆಚ್ಚಾಗಿ ರಾಷ್ಟ್ರೀಯವೆಂದು ಹೇಳಬಹುದು. ಭಾಷೆ ಮತ್ತು ಇತರ ಎಲ್ಲಾ ಎಲ್ಲೆಕಟ್ಟುಗಳನ್ನು ಮೀರಿ ನಿಂತಿರುವ ಅವರ ಉನ್ನತಾದರ್ಶ ತಮಿಳುನಾಡಿಗೆ ಎಷ್ಟು ಅನ್ವಯಿಸುವುದೋ ಭಾರತದ ಇತರ ಪ್ರದೇಶಗಳಿಗೆ ಅಷ್ಟೇ ಅನ್ವಯಿಸುತ್ತದೆ. ಆದ್ದರಿಂದ ಅವರ ಆದರ್ಶಗಳನ್ನು ತಮಿಳುನಾಡಿಗೆ ಮಾತ್ರ ಸೀಮಿತಗೊಳಿಸದೇ ಭಾರತದ ಎಲ್ಲಾ ಭಾಗಗಳಿಗೂ ಹರಡುವಂತೆ ಪ್ರಚಾರ ಮಾಡಬೇಕಾಗಿದೆ. ಈ ನಿಟ್ಟಿನಲ್ಲಿ ಸಾಹಿತ್ಯ ಅಕಾದೆಮಿಯು 'ಭಾರತೀಯ ಸಾಹಿತ್ಯ ನಿರ್ಮಾಣಕಾರರು' ಮಾಲೆಯಲ್ಲಿ ಅವರನ್ನು ಜನರಿಗೆ ಪರಿಚಯಿಸುತ್ತಿರುವುದು ಸೂಕ್ತವೂ, ಪ್ರಶಂಸನೀಯವೂ ಆಗಿದೆ. ಹೀಗೆ ಮಾಡುವಲ್ಲಿ ಪರೋಕ್ಷವಾಗಿ ರಾಮಲಿಂಗಮ್ ಪಿಳ್ಳೆಯವರ ಸಾಹಿತ್ಯ ಕೃತಿಗಳ ಮುಖ್ಯ ಧ್ಯೇಯವಾಗಿರುವ ರಾಷ್ಟ್ರೀಯ ಏಕತೆಯನ್ನು ಪ್ರೋತ್ಸಾಹಿಸಿದಂತೆ ಆಗಿದೆ.

ದುರದೃಷ್ಟವಶಾತ್ ರಾಮಲಿಂಗಂ ಪಿಳ್ಳೆಯವರಿಗೆ ತಮಿಳುನಾಡಿನ ರಾಜಕೀಯ ಹಾಗೂ ಸಾಹಿತ್ಯಕ ಕ್ಷೇತ್ರಗಳಲ್ಲಿ ಸಲ್ಲಬೇಕಾಗಿದ್ದ ಸ್ಥಾನ ದೊರೆಯಲಿಲ್ಲ. ಇದಕ್ಕೆ ಕಾರಣ ಅವರು ಒಂದು ಕಡೆ ರಾಷ್ಟ್ರೀಯತೆಯನ್ನು ಅಪ್ಪಿಕೊಂಡು ಇನ್ನೊಂದು ಕಡೆ ತಾಯ್ನಾಡಿ ತಮಿಳು ಮತ್ತು ಅದರ ಸಂಸ್ಕೃತಿಯನ್ನು ಅತ್ಯಂತ ಪ್ರೀತಿಯಿಂದ ಕಂಡದ್ದು – ಈ ಭಾವೋದ್ವೇಗಗಳ ಮಧ್ಯೆ ಸಿಲುಕಿಕೊಂಡದ್ದು. ತಮಿಳು ಮತ್ತು ತಮಿಳು ಸಂಸ್ಕೃತಿಯ ಬಗೆಗೆ ಅವರಿಗಿದ್ದ ಅಪಾರವಾದ ಮಮತೆ, ತಮಿಳು ಭಾಷೆಗಾಗಿ ದುಡಿವವರ ಬಗೆಗೆ ರಾಜಕೀಯವಾಗಿ ಅವರು ಯಾವುದೇ ಬಣಕ್ಕೆ ಸೇರಿದ್ದರೂ ಸಹ ಅವರನ್ನು ಪೂರ್ವಾಗ್ರಹವಿಲ್ಲದೆ ಮಾಡಿದ ಪ್ರಶಂಸೆ ಮುಂತಾದವುಗಳನ್ನು ರಾಷ್ಟ್ರೀಯ ವಾದಿಗಳು ಸಂಕುಚಿತವೆಂದು ಭಾವಿಸಿದ್ದು, ತಮಿಳು ಮಡಿವಂತಿಕೆಯಿಲ್ಲದ ಅವರ ಔದಾರ್ಯ, ಹಿಂದಿ ಭಾಷೆಯ ದಬ್ಬಾಳಿಕೆ, ಆರ್ಯ-ದ್ರಾವಿಡ ಘರ್ಷಣೆ ಹಾಗೂ ಪ್ರಾಂತೀಯತೆಯನ್ನು ಕೆಲವು ತಮಿಳು ಪಂಥಗಳು ಅವರನ್ನು ತಮಿಳು ವಿರೋಧಿ ಎಂದು ಅಪಾರ್ಥ ಮಾಡಿಕೊಂಡದ್ದು ಮುಂತಾದ ಘಟನೆಗಳಿಂದಾಗಿ ಅತ್ತ ರಾಷ್ಟ್ರೀಯ ವಾದಿಗಳು, ಇತ್ತ ತಮಿಳು ಪ್ರಾಂತೀಯವಾದಿಗಳು ಅವರನ್ನಾಗಲೀ ಅವರ ಧ್ಯೇಯಾದರ್ಶಗಳನ್ನಾಗಲೀ ಮನಃಪೂರ್ವಕವಾಗಿ ಪೋಷಿಸಲಿಲ್ಲ. ಹೀಗಾಗಿ ಸ್ವಾತಂತ್ರ್ಯಪೂರ್ವದಲ್ಲಿ ಪೂರ್ಣಚಂದ್ರನಂತಿದ್ದ ಅವರ ಜನಪ್ರಿಯತೆ ಸ್ವಾತಂತ್ರ್ಯಾನಂತರ ಕ್ರಮೇಣ ಕರಗುತ್ತಾ ಬಂದಿತು. ಈ ಪುಸ್ತಿಕೆಯು ಜನರಿಗೆ ಅವರನ್ನು, ಅವರ ಕೃತಿಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ ಎಂಬ ನಂಬಿಕೆ ಇದೆ.

ಇಂತಹ ಯೋಜನೆಯನ್ನು ವಹಿಸಿಕೊಟ್ಟಿದ್ದಕ್ಕಾಗಿ ಲೇಖಕರು ಸಾಹಿತ್ಯ ಅಕಾದೆಮಿಗೆ ಅತ್ಯಂತ ಆಭಾರಿಯಾಗಿದ್ದಾರೆ. ಅಂತೆಯೇ ಶ್ರೀಯುತರಾದ ಕಣ್ಣನ್, ತಮಿಳು ಪ್ರಾಧ್ಯಾಪಕರು, ಮರಿಯಾ, ಜೋಸೆಫ್, ಜೇವಿಯರ್, ಇಂಗ್ಲಿಷ್ ಪ್ರಾಧ್ಯಾಪಕರು, ಸರಸ್ವತಿ ನಾರಾಯಣ್ ಕಾಲೇಜು, ಮಧುರೈ. ಶ್ರೀ ಜಯಲಾಲನ್, ಇಂಗ್ಲಿಷ್ ಅಧ್ಯಾಪಕರು, ಸರಕಾರಿ ಕಲಾ ಕಾಲೇಜು, ಚೆಯ್ಯಾರ್, ಡಾ|| ಮುರುಘರತ್ನಮ್, ತಮಿಳು ಪ್ರವಾಚಕರು, ಡಾ|| ಮು[illegible]ತ ನಾಯಕಮ್, ಇಂಗ್ಲಿಷ್ ಪ್ರವಾಚಕರು, ಮಧುರೈ ಕಾಮರಾಜ ವಿಶ್ವವಿದ್ಯಾಲಯ, ಇವರು ಈ ಪುಸ್ತಕವನ್ನು ರೂಪಿಸಿ ನಾಮಕ್ಕಲ್ ಕವಿಗಳ ಕೆಲವು ಪದ್ಯಗಳನ್ನು ಇಂಗ್ಲಿಷಿಗೆ ಅನುವಾದ ಮಾಡುವಲ್ಲಿ ಅಮೂಲ್ಯ ಸಲಹೆಗಳನ್ನು ನೀಡಿ ಸಹಕರಿಸಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

— ಕೆ. ಆರ್. ಹನುಮಂತನ್

# ಪ್ರಸ್ತಾವನೆ

'ನಾಮಕ್ಕಲ್ ಕವಿ' ಎಂಬ ಹೆಸರಿನಿಂದ ಜನಪ್ರಿಯರಾಗಿರುವ ವಿ. ರಾಮಲಿಂಗ ಪಿಳ್ಳೆಯವರು ಭಾರತದಲ್ಲಿ ರಾಜಕೀಯ ಅಸ್ಥಿರತೆ, ಸಾಮಾಜಿಕ ಅಶಾಂತಿ ಹಾಗೂ ಸಾಂಸ್ಕೃತಿಕ ಪುನಶ್ಚೇತನದ ಕಾಲಘಟ್ಟದಲ್ಲಿ ಇದ್ದವರು. ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಜನಿಸಿದ ಅವರು ರಾಜಾರಾಮ ಮೋಹನರಾಯ್, ಈಶ್ವರಚಂದ್ರ ವಿದ್ಯಾಸಾಗರ್, ಶಿವಾನಂದ ಸರಸ್ವತಿ, ರವೀಂದ್ರನಾಥ ಠಾಕೂರ್, ರಾಮಕೃಷ್ಣ ಪರಮಹಂಸ ಹಾಗೂ ಸ್ವಾಮಿ ವಿವೇಕಾನಂದ ಮುಂತಾದ ಧಾರ್ಮಿಕ ಹಾಗೂ ಸಾಮಾಜಿಕ ಸುಧಾರಕರ ಪ್ರಭಾವದಿಂದ ಬೆಳೆದವರು. ಇಂತಹವರ ಆದರ್ಶ ಗಳನ್ನು ಅಂತರ್ಗತ ಮಾಡಿಕೊಂಡು ಭಾರತೀಯ ಸಂಸ್ಕೃತಿಯಲ್ಲಿ ಅದರಲ್ಲೂ ವಿಶೇಷ ವಾಗಿ ಅವರನ್ನು ಪೋಷಿಸಿದ ತಮಿಳು ಸಂಸ್ಕೃತಿಯಲ್ಲಿ ಒಲವು ಬೆಳೆಸಿಕೊಂಡವರು. ಹರಯದಲ್ಲಿಯೇ ಬಂಕಿಮಚಂದ್ರ ಚಟರ್ಜಿಯವರ 'ವಂದೇ ಮಾತರಮ್' ಗೀತೆ ದೇಶ ಭಕ್ತಿಯನ್ನು ಹುರುಪುಗೊಳಿಸಿತು. ಉನ್ನತ ವ್ಯಾಸಂಗದ ಹಂತದಲ್ಲಿ ಅರವಿಂದರು, ಬಾಲಗಂಗಾಧರ ತಿಲಕರು ಮುಂತಾದ ತೀವ್ರವಾದಿಗಳ ಲೇಖನಗಳನ್ನು ಅತೀವ ಆಸಕ್ತಿ ಯಿಂದ ಓದುತ್ತಿದ್ದು ಕಾಲಗತಿಯಲ್ಲಿ ಅವರ ಆರಾಧಕರಾದರು. ಇವರೆಲ್ಲರ ಪ್ರಭಾವ ದಿಂದಾಗಿ ಭಾರತದ ಸ್ವಾತಂತ್ರ್ಯ ಹಿಂಸಾತ್ಮಕ ಕ್ರಾಂತಿಯಿಂದಲ್ಲದೆ ಬೇರೆ ಮಾರ್ಗದಿಂದ ಗಳಿಸಲು ಸಾಧ್ಯವಿಲ್ಲವೆಂದೂ ಅವರೂ ನಂಬಿದರು. ಆದರೆ ನಂತರ ಗಾಂಧೀಜಿಯವರ ಪ್ರಭಾವ ಅವರ ಮೇಲೆ ತೀವ್ರ ಪರಿಣಾಮ ಬೀರಿ ಅಹಿಂಸಾಮಾರ್ಗವೊಂದೇ ಭಾರತಕ್ಕೆ ಸ್ವಾತಂತ್ರ್ಯ ಪಡೆಯಲು ಸರಿಯಾದ ದಾರಿಯೆಂದು ಮನವರಿಕೆ ಮಾಡಿ ಕೊಂಡರು. ಹೀಗೆ ಗಾಂಧೀಜಿಯವರ ಪರಮ ಆರಾಧಕರಾಗಿ ಅವರು ಪ್ರಾರಂಭಿಸಿದ ಚಳುವಳಿಗಳಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಭಾಗವಹಿಸುತ್ತಾ ಬಂದರು. ಅವರ ಬರಹಗಳಲ್ಲಿ ದೇಶಪ್ರೇಮ ಮತ್ತು ಗಾಂಧಿವಾದ ತುಂಬಿ ತುಳುಕಾಡುತ್ತಿರುವುದ ರಿಂದ ಜನರು ಅವರನ್ನು 'ದೇಶಭಕ್ತ ಕವಿ' ಇಲ್ಲವೆ 'ಗಾಂಧಿವಾದಿ ಕವಿ' ಎಂದು ಕರೆಯಲು ಮೊದಲು ಮಾಡಿದರು. ಹೀಗೆ ಅವರ ರಾಜಕೀಯಾಭಿಪ್ರಾಯಗಳೆಲ್ಲವೂ ಕಾಂಗ್ರೆಸಿನಲ್ಲಿ ಮಿತವಾದಿಗಳಾಗಿದ್ದ ಗೋಖಲೆ ಹಾಗೂ ಗಾಂಧೀಜಿಯವರ ವ್ಯಕ್ತಿತ್ವ ಗಳಿಂದ ಪ್ರಭಾವ ಬೀರಿದೆ.

ಸಾಮಾಜಿಕ ಮತ್ತು ಸಾಂಸ್ಕೃತಿಕ ನಿಟ್ಟಿನಲ್ಲಿ ಬಂಗಾಳದಿಂದ ಭಾರತದ ಇತರ ಭಾಗ ಗಳಿಗೆ ಹಬ್ಬುತ್ತಿದ್ದ ಕಲೆ ಮತ್ತು ಸಾಹಿತ್ಯ ಪುನರುಜ್ಜೀವನ ಚಳುವಳಿಯ ಪ್ರಭಾವ

ಹೆಚ್ಚಾಗಿ ಅವರ ಮೇಲೆ ಉಂಟಾಯಿತು. ಸಾಮಾಜಿಕ ಅನಿಷ್ಟಗಳಾದ ಬಾಲ್ಯವಿವಾಹ, ಅಸ್ಪೃಶ್ಯತೆ, ವರದಕ್ಷಿಣೆ, ಶಿಶುಹತ್ಯೆ ಮುಂತಾದವುಗಳ ಬಗೆಗೆ ದ್ವೇಷ ಬೆಳೆಸಿಕೊಂಡ ಅವರು ಅಂತರಜಾತಿ ವಿವಾಹ, ಸಾಮೂಹಿಕ ಭೋಜನ, ವಿಧವಾ ವಿವಾಹ, ಅಸ್ಪೃಶ್ಯರಿಗೆ ದೇವಾಲಯ ಪ್ರವೇಶ ಮುಂತಾದವುಗಳನ್ನು ಒತ್ತಾಯಿಸಿದರು. ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಾದ ಖಾದಿ, ಮದ್ಯಪಾನ ನಿರೋಧ, ಗ್ರಾಮಾಭ್ಯುದಯ ಮುಂತಾದವುಗಳನ್ನು ಮೆಚ್ಚಿ ಅವುಗಳನ್ನು ತಮ್ಮ ಲೇಖನ, ಗ್ರಂಥ, ಹಾಗೂ ಭಾಷಣಗಳಿಂದ ಪ್ರಚಾರ ಮಾಡಲು ತೊಡಗಿದರು. ಉತ್ತರ ಭಾರತದಲ್ಲಿ ರಾಮಕೃಷ್ಣ ಪರಮಹಂಸ ಹಾಗೂ ವಿವೇಕಾನಂದರು ಮತ್ತು ತಮಿಳುನಾಡಿನಲ್ಲಿ ರಾಮಲಿಂಗಸ್ವಾಮಿಗಳು ಪ್ರಚಾರ ಮಾಡಿದ ಪರಮತ ಸಹಿಷ್ಣುತೆ ಅವರಿಗೆ ಮೆಚ್ಚುಗೆಯಾಯಿತು. ಅಂದು ಪ್ರಚಲಿತವಿದ್ದ ಪುನರುಜ್ಜೀವನ ಹಾಗೂ ಸುಧಾರಣೆಗಳು ಅವರ ಸಾಮಾಜಿಕ ಹಾಗೂ ಧಾರ್ಮಿಕ ಅಭಿಪ್ರಾಯಗಳ ಮೇಲೆ ಅತಿ ಹೆಚ್ಚಾಗಿ ಪ್ರಭಾವ ಬೀರಿದ್ದವು.

ಸಾಹಿತ್ಯ ಕ್ಷೇತ್ರದಲ್ಲಿ ಬಂಗಾಳದ ಲೇಖಕರನ್ನು ಅನುಸರಿಸಿ ಜನಸಾಮಾನ್ಯರಿಗೂ ತಿಳಿಯುವಂತೆ ಸುಲಭವಾದ ತಮಿಳು ಶೈಲಿಯಲ್ಲಿ ಅನೇಕ ಕಾದಂಬರಿ, ಸಣ್ಣಕತೆ ಮುಂತಾದವುಗಳನ್ನು ರಚಿಸಿದರು. ಅವರ ಪದ್ಯಗಳು, ಗೀತೆಗಳು ಎಂತಹ ಸುಲಭ ಶೈಲಿಯಲ್ಲಿ ರಚಿತವಾಗಿವೆಯೆಂದರೆ ಅವುಗಳನ್ನು ಕೇಳುವವರು ಅನಕ್ಷರಸ್ಥರಾಗಿದ್ದರೂ ಸರಿಯೆ ಅವುಗಳಲ್ಲಡಗಿರುವ ಭಾವವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಈ ವಿಷಯದಲ್ಲಿ ತಮಿಳುನಾಡಿನ ಕವಿಗಳಾದ ಮಹಾಕವಿ ಸುಬ್ರಹ್ಮಣ್ಯ ಭಾರತಿ ಹಾಗೂ ದೇಸಿಕ ವಿನಾಯಕಮ್ ಪಿಳ್ಳೈಯವರನ್ನು ಅವರು ಅನುಕರಿಸಿದರು. ರಾಷ್ಟ್ರಕವಿ ಭಾರತಿಯಾರರ ನಿಧನದ ನಂತರ ಸುಲಭ ಶೈಲಿಯಲ್ಲಿ ಪದ್ಯ, ಗದ್ಯಗಳನ್ನು ಹೇಳುವ ಪರಂಪರೆಯನ್ನು ರಾಮಲಿಂಗಮ್ ಪಿಳ್ಳೈಯವರು ಮುಂದುವರೆಸಿಕೊಂಡು ಬಂದರು. ಆಧುನಿಕ ಕವಿಗಳಾದ ರಾಮಲಿಂಗಸ್ವಾಮಿಗಳು, ತಾಯುಮಾನವ ಸ್ವಾಮಿಗಳು ಹಾಗೂ ಮಧ್ಯಕಾಲೀನ ಕವಿಗಳಾದ ಕಂಬರ್ ಹಾಗೂ ಪುಗಳೇಂದಿ ಮುಂತಾದ ಕವಿಗಳು ಅವರ ಮೇಲೆ ಅಳಿಸಲಾಗದ ಪ್ರಭಾವ ಬೀರಿದ್ದಾರೆ.

ತಮಿಳು ನಾಡಿನಾದ್ಯಂತ ಪ್ರತ್ಯೇಕತಾವಾದ, ಆತ್ಮಗೌರವ ಹಾಗೂ ಬ್ರಾಹ್ಮಣ ವಿರೋಧಿ ಮುಂತಾದ ಸಂಕುಚಿತ ಮನೋಭಾವದ ಚಳುವಳಿಗಳು, ತೀವ್ರ ಚಟುವಟಿಕೆಗಳು ನಡೆಯುತ್ತಿದ್ದ ಕಾಲ ಅದು. ಇ.ವಿ. ರಾಮಸ್ವಾಮಿ ನಾಯಕರ್ ಅವರು ದ್ರಾವಿಡ ಚಳುವಳಿಯನ್ನು ಆರಂಭಿಸಿ ಬ್ರಾಹ್ಮಣರ ಮತ್ತು ಬ್ರಾಹ್ಮಣೇತರರ ಮಧ್ಯೆ ವಿಷಬೀಜವನ್ನು ಬಿತ್ತಲು ಪ್ರಾರಂಭಿಸಿದರು. ಇಂತಹ ಸಂಕುಚಿತ ಭಾವನೆಗಳನ್ನು ಕವಿ ರಾಮಲಿಂಗಮ್ ಅವರು ತಮ್ಮ ಗ್ರಂಥಗಳಲ್ಲಿ ಹಾಗೂ ಭಾಷಣಗಳಲ್ಲಿ ತೀವ್ರವಾಗಿ ವಿರೋಧಿಸಿದರು. ಆಸ್ತಿಕರಾಗಿದ್ದ ಅವರು ಇ.ವಿ.ಆರ್. ಅವರ ವೈಚಾರಿಕವಾದ ಮತ್ತು ನಾಸ್ತಿಕವಾದಗಳಿಗೆ ಸ್ವಲ್ಪವೂ ಸೊಪ್ಪು ಹಾಕಲಿಲ್ಲ. ಇಂತಹ ಭಾವನೆಗಳು ತಮಿಳು

ನಾಡಿಗೆ ಸೇರಿದ ಹೊರಗಿನವು ಎಂದು ಅವರು ಅಭಿಪ್ರಾಯ ಪಡುತ್ತಾರೆ. ಬ್ರಾಹ್ಮಣರನ್ನು ಅವಹೇಳನ ಮಾಡುವುದನ್ನು ಅವರು ತೀವ್ರವಾಗಿ ಖಂಡಿಸುತ್ತಾರೆ. ಸಮಾಜದಲ್ಲಿ ಆಗುತ್ತಿರುವ ಎಲ್ಲಾ ಕೆಡಕುಗಳಿಗೆ ಬ್ರಾಹ್ಮಣರೇ ಕಾರಣ ಎಂಬ ಆಪಾದನೆ ಸರಿ ಅಲ್ಪ ಸಂಖ್ಯಾತರಾದ ಬ್ರಾಹ್ಮಣರ ಮೇಲೆ ಬಹುಸಂಖ್ಯಾತ ಬ್ರಾಹ್ಮಣೇತರರು ಹೊರಿಸುವುದು ಸಾಧುವಲ್ಲವೆಂದು ಹೇಳುತ್ತಾರೆ. ತಮಿಳುನಾಡಿನಾದ್ಯಂತ ಬ್ರಾಹ್ಮಣ ವಿರೋಧಿ ವಾತಾವರಣವಿದ್ದ ಆ ಸಮಯದಲ್ಲಿ ಇವರ ಕೂಗು ಒಂಟಿಧ್ವನಿಯಾಗಿತ್ತು. ಅದೇ ಸಮಯದಲ್ಲಿ ದ್ರಾವಿಡ ಮುನ್ನೇಟ್ರ ಕಳಗಂ ಪಕ್ಷದ ಧ್ಯೇಯಗಳಾದ ತಮಿಳು ಭಾಷೆ ಹಾಗೂ ತಮಿಳು ಸಂಸ್ಕೃತಿಯ ಪ್ರೇಮದ ಬಗೆಗೆ ಅವರೂ ಪ್ರಭಾವಿತರಾಗಿದ್ದರು. ವಾಸ್ತವವಾಗಿ ಅವರು ಆರೋಗ್ಯಕರವಾದ ಪ್ರಾಂತೀಯತೆಗೆ ಬೆಂಬಲ ನೀಡಿದರು; ಪ್ರತ್ಯೇಕತೆಗೆ ಹಾಗೂ ಭಾಷಾಂಧತೆಗೆ ಅಲ್ಲ. ಅಖಂಡತ್ವವನ್ನು ಛಿದ್ರಗೊಳಿಸುವಂತಹ ಯಾವುದೇ ನೀತಿಗೆ ಅವರು ಸಹಾನುಭೂತಿ ತೋರಿಸಲಿಲ್ಲ. ಪ್ರಬಲವೂ, ಅವಿಚ್ಛಿನ್ನವೂ ಅಖಂಡವೂ ಆದ ಭಾರತವೆ ಅವರ ಆಶಯ, ಬೇರೇನೂ ಅಲ್ಲ.

19-20 ನೆಯ ಶತಮಾನದ ಕ್ರಾಂತಿಕಾರಕ ಆದರ್ಶಗಳನ್ನು ಮೈಗೂಡಿಸಿಕೊಂಡು ಕಾಲಕ್ಕನುಗುಣವಾಗಿ ಬಾಳಿದವರು ವಿ. ರಾಮಲಿಂಗಮ್ ಪಿಳ್ಳೈಯವರು. ಹಾಗೆಯೇ ಭಾರತೀಯ ಹಾಗೂ ತಮಿಳು ಸಂಸ್ಕೃತಿಗಳನ್ನು ಬೇರೂರಿಸಿಕೊಂಡಿರುವ ಒಬ್ಬ ಸಂಪ್ರದಾಯವಾದಿಗಳು ಆಗಿದ್ದಾರೆ.

# ಜೀವನ

ನಾಮಕ್ಕಲ್ ವಿ. ರಾಮಲಿಂಗಮ್ ಪಿಳ್ಳೈ ಅವರ ಬಾಲ್ಯಜೀವನ ಒಂದು ತೆರೆದ ಪುಸ್ತಕ. ಏಕೆಂದರೆ 'ಎನ್ ಕತೈ' (ನನ್ನ ಕತೆ) ಎಂಬ ಪುಸ್ತಕದಲ್ಲಿ ಅದನ್ನು ಕುರಿತು ವಿವರವಾಗಿ ಅವರು ಬರೆದಿದ್ದಾರೆ. 1888 ರಿಂದ 1944ರ ವರೆಗಿನ ಅವರ ಜೀವನ ಚರಿತ್ರೆ ಅದರಲ್ಲಿ ಚಿತ್ರಿತವಾಗಿದೆ. ಒಂದು ಕಾದಂಬರಿಯಂತೆ ಓದಿಸಿಕೊಂಡು ಹೋಗುವ ಈ ಪುಸ್ತಕದ ಸಂಕ್ಷಿಪ್ತ ಆವೃತ್ತಿಯನ್ನು 1950 ರಲ್ಲಿ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಉಪಪಠ್ಯ ಪುಸ್ತಕವನ್ನಾಗಿ ಆಯ್ಕೆ ಮಾಡಿರುವುದು ಇದರ ಮಹತ್ವವನ್ನು ಎತ್ತಿ ತೋರಿಸುತ್ತದೆ.

ಸೇಲಮ್ ಜಿಲ್ಲೆಯ ಮೋಹನೂರು ಕಾವೇರಿ ದಂಡೆಯಲ್ಲಿರುವ ಒಂದು ಚಿಕ್ಕ ಊರು. ಇಲ್ಲಿ 1888 ಅಕ್ಟೋಬರ್ 19 ರಂದು ಅವರ ಜನನ. ಅವರ ತಂದೆ ವೆಂಕಟರಾಮ ಪಿಳ್ಳೈ ಆಗ ಮೋಹನೂರಿನಲ್ಲಿ ಹೆಡ್ ಕಾನ್‌ಸ್ಟೇಬಲ್ ಆಗಿದ್ದರು. ಅವರ ತಾಯಿ ಅಮ್ಮಣಿ ಅಮ್ಮಾಳ್ ಸೇಲಮ್ ಹತ್ತಿರದ ಒಂದು ಹಳ್ಳಿಯಲ್ಲಿ ಜನಿಸಿದವರು ; ಪರಮ ದೈವಭಕ್ತೆ. ರಾಮಲಿಂಗಮ್ ಹುಟ್ಟುವುದಕ್ಕೆ ಮುಂಚೆ ಅವರಿಗೆ ಏಳು ಜನ ಹೆಣ್ಣುಮಕ್ಕಳಾಗಿದ್ದರು ; ಎಂಟನೆಯದು ಗಂಡು ಮಗುವಾಗಲಿ ಎಂದು ತಮಿಳು ನಾಡಿನ ಎಲ್ಲಾ ಮುಖ್ಯ ದೇವರುಗಳಿಗೂ ಅವರು ಹರಕೆ ಹೊತ್ತಿದ್ದರು. ಅಮ್ಮಣಿ ಅಮ್ಮಾಳ್ ಎಂಟನೆಯ ಮಗುವಿಗೆ ಗರ್ಭ ಧರಿಸಿದ್ದಾಗ ರಾಮೇಶ್ವರ ಯಾತ್ರೆಗಾಗಿ ಹೊರಟಿದ್ದ ಬ್ರಾಹ್ಮಣ ಮುದುಕ ದಂಪತಿಗಳು ಮೋಹನೂರಿನಲ್ಲಿ ತಂಗಿದ್ದರು. ವೆಂಕಟರಾಮ ಪಿಳ್ಳೈ ಮತ್ತು ಅವರ ಹೆಂಡತಿ ನೀಡಿದ ಅತಿಥಿ ಸತ್ಕಾರದಿಂದ ಸಂತೃಪ್ತ ರಾದ ಆ ಬ್ರಾಹ್ಮಣ ದಂಪತಿಗಳು ಅಮ್ಮಣಿ ಅಮ್ಮಾಳ್ ಗಂಡುಮಗುವಿಗೆ ಜನ್ಮ ನೀಡುವುದಾಗಿಯೂ ಅದಕ್ಕೆ ರಾಮೇಶ್ವರದ ಅಧಿದೇವತೆ ರಾಮಲಿಂಗಮ್ ಎಂಬ ಹೆಸರನ್ನಿಡಬೇಕೆಂದು ಹಾರೈಸಿ ಮುಂದೆ ಪ್ರಯಾಣ ಮಾಡಿದರು. ಅವರ ಹಾರೈಕೆ ಸುಳ್ಳಾಗಲಿಲ್ಲ ; ಎಂಟನೆಯ ಮಗು ಗಂಡುಮಗುವಾಯಿತು. ಹುಣ್ಣಿಮೆಯ ಶುಕ್ರವಾರದ ದಿನದಂದು ಜನಿಸಿದ ಆ ಮಗುವಿಗೆ ಮುಂದೆ ಒಳ್ಳೆಯ ಭವಿಷ್ಯವಿದೆಯೆಂದು ಜ್ಯೋತಿಷಿ ಗಳು ಹೇಳಿದರು.

ಅವರ ತಂದೆತಾಯಿ ಅನಕ್ಷರಸ್ಥರಾಗಿದ್ದರೂ ವಿವೇಕಿಗಳೂ ಧೈರ್ಯಶಾಲಿಗಳೂ ಆಗಿದ್ದರು. ತಮ್ಮ ಆತ್ಮಚರಿತ್ರೆಯಲ್ಲಿ ಅವರು ಒಂದೆಡೆ ತಾಯಿಯ ಧೈರ್ಯವನ್ನು ಕುರಿತ ಒಂದು ಘಟನೆಯನ್ನು ಹೇಳುತ್ತಾರೆ.

ಅಮ್ಮಣಿ ಅಮ್ಮಾಳ್ ಚಿಕ್ಕಂದಿನಲ್ಲಿದ್ದ ಗ್ರಾಮದಲ್ಲಿ ಒಂದು ದೊಡ್ಡ ಹಿಪ್ಪೆಮರ
ವಿತ್ತು. ಅದರಲ್ಲಿ ಒಂದು ದೆವ್ವ ವಾಸವಾಗಿದೆಯೆಂದೂ ಹತ್ತಿರ ಬಂದ ಎಲ್ಲರನ್ನೂ
ಅದು ಸಾಯಿಸುತ್ತದೆ ಎಂಬ ವದಂತಿ ಸುತ್ತಮುತ್ತ ಪ್ರಚಾರವಾಗಿತ್ತು. ಆಕೆ ಅಂತಹ
ಸುದ್ದಿಗೆ ಸ್ವಲ್ಪವೂ ಕಿವಿಗೊಡದೆ ಧೈರ್ಯವಾಗಿ ಅದರ ಹತ್ತಿರವಿದ್ದ ಕೊಳಕ್ಕೆ ಹೋಗಿ
ನೀರು ತರುತ್ತಿದ್ದಳು. ಒಂದು ದಿನ ಆಕೆ ಹಾಗೆ ಹೋಗುತ್ತಿರುವಾಗ ಕಪ್ಪನೆಯ
ಒಂದು ಆಕೃತಿ ಮರದಿಂದ ಇಳಿದು ಬಂದು ಆಕೆಯತ್ತ ಧಾವಿಸಿ ಬಂತು. ಆಕೆ ಸ್ವಲ್ಪವೂ
ಧೃತಿಗೆಡಲಿಲ್ಲ. ತೀರಾ ಹತ್ತಿರ ಬರುವವರೆಗೂ ಕಾದಿದ್ದು ತನ್ನಲ್ಲಿದ್ದ ಕಬ್ಬಿಣದ ಸಲಾಕೆ
ಯಿಂದ ಅದರ ನೆತ್ತಿಯ ಮೇಲೆ ಚೆನ್ನಾಗಿ ಒಂದು ಏಟು ಕೊಟ್ಟಳು. ಆಕೃತಿ ಅಳುತ್ತಾ
ಓಡಿಹೋಯಿತು. ಸ್ವಲ್ಪ ದಿನಗಳಾದ ನಂತರ ಅವರ ಊರಿನ ಸಂತೆಯಲ್ಲಿ ತಲೆ
ಗಾಯಕ್ಕೆ ಪಟ್ಟಿಕಟ್ಟಿದ್ದ ಅಂತಹುದೇ ಆಕಾರದ ಮನುಷ್ಯನನ್ನು ಕಂಡಾಗ ತನ್ನ ಗಂಡನಿಗೆ
ಹೇಳಿ ಅವನನ್ನು ದಸ್ತಗಿರಿ ಮಾಡಿಸಿದರು. ತನ್ನ ಅಪರಾಧವನ್ನು ಒಪ್ಪಿಕೊಂಡ
ಅವನು ಅದೇ ಊರಿನ ದೇವಸ್ಥಾನದ ಅರ್ಚಕ. ಮಾರುವೇಷದಿಂದ ಜನರನ್ನು
ಹೆದರಿಸಿ, ಅವರು ದೇವರಿಗೆ ಕೋಳಿ, ಆಡು ಮುಂತಾದವುಗಳನ್ನು ಬಲಿ ಕೊಡುವಂತೆ
ಮಾಡುವುದು. ಅದರಲ್ಲಿ ತನಗೆ ಪಾಲು ಸಿಗುವುದೆಂದು ಅವನು ನಿಜಸಂಗತಿಯನ್ನು
ಬಯಲು ಮಾಡಿದನು. ತಮ್ಮ ತಾಯಿ ರಾಮಾಯಣ, ಮಹಾಭಾರತಗಳಿಂದ ಕತೆ
ಗಳನ್ನು ಹೇಳುತ್ತಿದ್ದುದಾಗಿಯೂ ಆಕೆಯನ್ನು ಹೆಮ್ಮೆಯಿಂದ ನೆನಪಿಸಿಕೊಳ್ಳುತ್ತಾರೆ.
'ಏನೇ ಆಗಲಿ ಸುಳ್ಳು ಹೇಳಬೇಡ, ಕೆಟ್ಟ ಹೆಸರನ್ನು ಪಡೆಯಬೇಡ' ಎಂದು ಒತ್ತಿ
ಹೇಳುತ್ತಿದ್ದುದನ್ನು ಅವರು ಮತ್ತೆ ಮತ್ತೆ ಜ್ಞಾಪಿಸಿಕೊಳ್ಳುತ್ತಾರೆ. ಆಕೆಯ ಈ
ಹಿತಬೋಧೆ ತಮಗೆ ಅಮೂಲ್ಯ ಸಂಪತ್ತೆಂದೂ ಅದನ್ನು ತಮ್ಮ ಜೀವನಪರ್ಯಂತ
ಉಳಿಸಿಕೊಂಡು ಬಂದುದಾಗಿಯೂ ಅವರು ಜ್ಞಾಪಿಸಿಕೊಳ್ಳುತ್ತಾರೆ. ಇದರ ಪರಿಣಾಮ
ವಾಗಿ ತಾವು ಸುಳ್ಳು ಹೇಳಲು ಬಯಸಿದರೂ ಅದು ಸಾಧ್ಯವಾಗಲಿಲ್ಲವೆಂದು ಅವರು
ಹೇಳುತ್ತಾರೆ.

ತಾಯಿಯ ಸಲಹೆ ಹೇಗೆ ಪರಿಣಾಮ ಬೀರಿತು ಎಂಬುವನ್ನು ತಿಳಿಸಲು ತಮ್ಮ
ಬಾಲ್ಯ ಜೀವನದ ಒಂದು ಘಟನೆಯನ್ನು ಹೇಳುತ್ತಾರೆ. ನಾಮಕ್ಕಲ್‌ನಲ್ಲಿ ಪ್ರಾಥಮಿಕ
ವಿದ್ಯಾಭ್ಯಾಸ ಮುಗಿಸಿ ಅವರು ಕೊಯಂಬತ್ತೂರಿನ ಒಂದು ಪ್ರೌಢಶಾಲೆಗೆ ಸೇರಿದರು.
ಅವರ ತಂದೆಯವರಿಗೆ ಅಲ್ಲಿಗೆ ವರ್ಗವಾಯಿತು. ಗಣಿತದ ವಿಷಯ ಬಿಟ್ಟು ಉಳಿದ
ಎಲ್ಲಾ ವಿಷಯಗಳಲ್ಲಿಯೂ ಅವರು ಚೆನ್ನಾಗಿಯೆ ಓದುತ್ತಿದ್ದರು. ಒಂದು ದಿನ
ಅವರ ಉಪಾಧ್ಯಾಯರು ಆಯ್ಕೆ ಪರೀಕ್ಷೆಯಲ್ಲಿ ಗಣಿತದಲ್ಲಿ ಅಂಕಗಳನ್ನು ಚೆನ್ನಾಗಿ
ತೆಗೆಯದಿದ್ದರೆ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಕುಳಿತುಕೊಳ್ಳಲು ಅನುಮತಿ ನೀಡುವುದಿಲ್ಲ
ವೆಂದು ಎಚ್ಚರಿಕೆ ನೀಡಿದರು. ಹುಡುಗನಿಗೆ ತೀರಾ ನಿರಾಶೆಯಾಯಿತು. ರಾತ್ರಿ
ಸ್ವಲ್ಪವೂ ನಿದ್ರೆಯಿಲ್ಲ. ಮಾರನೆಯ ದಿನ ವಿಷಯವನ್ನು ಆಪ್ತಮಿತ್ರ ರಾಮನಾಥನ್
ಅವರಿಗೆ ತಿಳಿಸಿ ಗೋಳಾಡಿದರು. ಈ ಗಂಡಾಂತರದಿಂದ ಪಾರಾವುದು ಹೇಗೆ ಎಂದು

ಇಬ್ಬರೂ ಬಹಳ ಹೊತ್ತು ಯೋಚಿಸುತ್ತಾ ಇರುವಾಗ ಕೊನೆಗೆ ಒಂದು ಉಪಾಯ ಹೊಳೆಯುತ್ತದೆ. ರಾಮನಾಥನ್ ಗಣಿತದಲ್ಲಿ ಮಾತ್ರ ಉತ್ತಮ ಅಂಕಗಳನ್ನು ಪಡೆಯುತ್ತಿದ್ದು ಉಳಿದ ವಿಷಯಗಳಲ್ಲಿ ತೀರಾ ಕಡಿಮೆ ಅಂಕಗಳನ್ನು ಪಡೆಯುತ್ತಿದ್ದ ವ್ಯಕ್ತಿ. ಆದ್ದರಿಂದ ರಾಮನಾಥನ್ ಬರೆಯುವ ಗಣಿತದ ಉತ್ತರ ಪೇಪರಿನಲ್ಲಿ ರಾಮಲಿಂಗಮ್ ಅವರ ಹೆಸರನ್ನು ಬರೆಯುವುದು ರಾಮಲಿಂಗಮ್ ಬರೆಯುವ ಉತ್ತರ ಪೇಪರಿನಲ್ಲಿ ರಾಮನಾಥನ್ ಅವರ ಹೆಸರನ್ನು ಬರೆಯಬೇಕೆಂದು ತೀರ್ಮಾನಿಸಲಾಯಿತು. ಅಂತೆಯೇ ರಾಮನಾಥನ್ ಅವರು ಪೇಪರಿನಲ್ಲಿ ರಾಮಲಿಂಗಮ್ ಎಂದು ಬರೆಯುತ್ತಾರೆ. ರಾಮಲಿಂಗಮ್ ಮಾತ್ರ ಮರೆತು ತಮ್ಮ ಹೆಸರನ್ನೇ ಉತ್ತರ ಪತ್ರಿಕೆಯಲ್ಲಿ ಬರೆದರು. ಹೀಗೆ ಸುಳ್ಳು ಹೇಳಲು ಪ್ರಯತ್ನಿಸಿದರೂ ಹಾಗೆ ಮಾಡಲು ಆಗಲಿಲ್ಲ.

ರಾಮಲಿಂಗಮ್ ಎಂಬ ಹೆಸರುಳ್ಳ ಎರಡು ಪೇಪರುಗಳನ್ನು ಕಂಡು ತರಗತಿ ಉಪಾಧ್ಯಾಯರಿಗೆ ದಿಕ್ಕು ತೋಚದಾಯಿತು. ಗದರಿಸಿ ಕೇಳಿದಾಗ ರಾಮಲಿಂಗಮ್ ನಡೆದ ಸಂಗತಿಯನ್ನು ಒಪ್ಪಿಕೊಂಡರು; ಕ್ಷಮೆ ಕೇಳಿದರು. ತರಗತಿ ಉಪಾಧ್ಯಾಯರು ಅವರ ತಪ್ಪನ್ನು ಕ್ಷಮಿಸಿ ಪರೀಕ್ಷೆಗೆ ಕುಳಿತುಕೊಳ್ಳಲು ಅನುಮತಿ ನೀಡಿದರು. ಆದರೆ 1906 ರಲ್ಲಿ ನಡೆದ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾಗಲಿಲ್ಲ. ಆಶ್ಚರ್ಯವೆಂದರೆ ಅವರು ಅನುತ್ತೀರ್ಣರಾಗಿದ್ದ ವಿಷಯ ಗಣಿತವಲ್ಲ; ಯಾವಾಗಲೂ ಹೆಚ್ಚು ಅಂಕ ಗಳಿಸುತ್ತಿದ್ದ ಇಂಗ್ಲಿಷ್ ಮತ್ತು ತಮಿಳು ವಿಷಯಗಳಲ್ಲಿ. ತಮ್ಮ ಬಿಡಿಸಲಾಗದ ಒಗಟುಗಳಲ್ಲಿ ಇದೂ ಒಂದಾಗಿದೆ ಎಂದು ಕವಿ ರಾಮಲಿಂಗಮ್ ಹೇಳುತ್ತಾರೆ. 1907 ರಲ್ಲಿ ಅವರು ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಜಯಗಳಿಸಿದರು. ನಂತರ ತಿರುಚಿಯ ಬಿಷಪ್ ಹೀಬರ್ ಕಾಲೇಜು ಎಂದು ಹೆಸರಾಗಿದ್ದ ಎಸ್.ಪಿ.ಜಿ. ಕಾಲೇಜಿಗೆ ಸೇರಿದರು.

ಇಂಟರ್‌ಮೀಡಿಯೇಟ್ ಅಥವಾ ಎಫ್.ಎ. ಓದುತ್ತಿರುವಾಗಲೇ ಅವರಿಗೆ ಬಲವಂತವಾಗಿ ತಂದೆಯ ಸಹೋದರಿಯ ಮಗಳು ಮುತ್ತಮ್ಮಾಳ್ ಜೊತೆ ಮದುವೆಯಾಗುತ್ತದೆ. ಇದು ನಡೆದದ್ದು 1909 ರಲ್ಲಿ. ಹುಡುಗಿಯ ಬಗೆಗೆ ಮೊದಲಿನಿಂದಲೂ ಅಸಮಾಧಾನದಿಂದಿದ್ದ ಕವಿ ತಮ್ಮ ಇಷ್ಟಕ್ಕೆ ವಿರೋಧವಾದ ಈ ವೈವಾಹಿಕ ಜೀವನವನ್ನು ನಡೆಸಲಿಲ್ಲ.

ತಿರುಚಿಯಲ್ಲಿ ಓದುತ್ತಿದ್ದಾಗ ಹಠಾತ್ತನೆ ಕಿವಿಯಲ್ಲಿ ವಿಪರೀತ ನೋವು ಕಾಣಿಸಿಕೊಂಡಿತು. ಚಿಕಿತ್ಸೆಗಾಗಿ ಆಗ ಮದರಾಸಿಗೆ ಹೋಗಬೇಕಾಯಿತು. ಅಲ್ಲಿ ಜಸ್ಟಿಸ್ ಪಾರ್ಟಿಯ ಮುಂದಾಳು ಡಾ|| ಟಿ. ಎಂ. ನಾಯರ್ ಅವರು ಚಿಕಿತ್ಸೆ ನೀಡಿದರು. ರಾಜಕೀಯ ಕೆಲಸಗಳಲ್ಲಿ ಮುಳುಗಿಹೋಗಿದ್ದ ಆ ವೈದ್ಯರು ರಾಮಲಿಂಗಮ್ ಅವರಿಗೆ ಸರಿಯಾದ ಚಿಕಿತ್ಸೆ ನೀಡಿ ಗಮನಿಸಲಾಗಲಿಲ್ಲ. ಅದರ ಪರಿಣಾಮವಾಗಿ ಅವರ ಒಂದು ಕಿವಿ ಶ್ರವಣಶಕ್ತಿಯನ್ನು ಪೂರ್ಣವಾಗಿ ಕಳೆದುಕೊಂಡಿತು. ಮುಂದಿನ ಅವರ

ಜೀವನಾವಧಿಯನ್ನೆಲ್ಲಾ ಹೀಗೆಯೇ ಕಳೆಯಬೇಕಾಯಿತು. ಅನೇಕ ವರ್ಷಗಳನಂತರ ಮಂದರಾಸಿನಲ್ಲಿ ಅವರಿಗೆ ಸನ್ಮಾನ ಏರ್ಪಡಿಸಿದ್ದ ಸಂದರ್ಭದಲ್ಲಿ ವಲ್ಲತ್ತೋಳ್ ಎಂಬ ಮಲಯಾಳಮ್ ಕವಿ ಸಭೆಯಲ್ಲಿ ಪಾಲ್ಗೊಂಡಿದ್ದರು. ತಾವು ವಲ್ಲತ್ತೋಳ್ ಅವರಿಗಿಂತ ಒಂದು ಹೆಜ್ಜೆ ಮುಂದಿರುವುದಾಗಿಯೂ ಏಕೆಂದರೆ ಅವರಿಗೆ ಎರಡೂ ಕಿವಿಗಳು ಕೇಳಿಸು ವುದಿಲ್ಲ ಎಂದು ಹಾಸ್ಯಚಟಾಕಿ ಹಾರಿಸಿ ಎಲ್ಲರನ್ನೂ ನಗೆಗಡಲಲ್ಲಿ ಮುಳುಗಿಸಿದರು.

ಮಂದರಾಸಿನಿಂದ ಹಿಂತಿರುಗಿದ ಕೂಡಲೆ ಪೋಲಿಸ್ ಸಬ್ ಇನ್‌ಸ್ಪೆಕ್ಟರ್ ಕೆಲಸಕ್ಕೆ ಸೇರುವಂತೆ ಅವರ ತಂದೆ ಒತ್ತಾಯಿಸಿದರು. ಮಂದರಾಸಿನ ಡೆಪ್ಯುಟಿ ಇನ್‌ಸ್ಪೆಕ್ಟರ್ ಜನರಲ್ ಅವರ ಶಿಫಾರಸಿನಿಂದ ಅವರಿಗೆ ಆ ಹುದ್ದೆ ದೊರೆತಿತ್ತು. ಪೋಲಿಸ್ ಉದ್ಯೋಗದ ಬಗ್ಗೆ ಅವರ ತಾಯಿಯವರಿಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲ. ಹೀಗಾಗಿ ಅದರ ಬಗೆಗೆ ಒಂದು ರೀತಿ ದ್ವೇಷ ಅವರಲ್ಲಿ ಬೆಳೆದು ಬಂದಿತ್ತು. ಈ ಕಾರಣದಿಂದ ಹುದ್ದೆಯನ್ನು ಒಪ್ಪಿಕೊಳ್ಳದೆ ಒಮ್ಮೆಲೇ ಅವರು ತಿರಸ್ಕರಿಸಿದರು. ಮನೆಬಿಟ್ಟು ಸುಮಾರು ಹದಿನೈದು ದಿನಗಳ ಕಾಲ ತಲೆಮರೆಸಿಕೊಂಡರು. ಕೊನೆಗೆ ಅವರ ತಂದೆ ನಾಮಕ್ಕಲ್ ತಹಸೀಲ್ದಾರರ ಕಛೇರಿಯಲ್ಲಿ ಒಂದು ಗುಮಾಸ್ತೆ ಹುದ್ದೆಯನ್ನು ಕೊಡಿಸಿದರು. ನಿಸ್ಸಾರವೂ ಯಾಂತ್ರಿಕವಾದ ಗುಮಾಸ್ತೆ ಕೆಲಸ ಅವರಿಗೆ ಹಿಡಿಸಲಿಲ್ಲ. ತಹಸೀಲ್ದಾರರು ಕಛೇರಿಯಲ್ಲಿಲ್ಲದ ಸಮಯ ಹೊಂಚಿನೋಡಿ ಕಾಲ್ಚೆಂಡು ಆಡಲು ಹೊರಗೆ ಹೋಗುತ್ತಿದ್ದರು. ಕಛೇರಿಯಲ್ಲಿರುವಾಗಲೂ ಕೆಲಸದ ಕಡೆ ಸರಿಯಾದ ಗಮನ ನೀಡುತ್ತಿರಲಿಲ್ಲ. ಪಕ್ಕದ ಗುಮಾಸ್ತರ ವ್ಯಂಗ್ಯ ಚಿತ್ರಗಳನ್ನು ಬರೆಯುತ್ತಾ ಕಾಲ ಕಳೆಯುತ್ತಿದ್ದರು. ಹೀಗೆ ಮಾಡುವಾಗ ಒಂದು ಸಲ ಇವು ತಹಸೀಲ್ದಾರರ ಕಣ್ಣಿಗೆ ಬಿತ್ತು. ಇಂತಹ ಕೆಲಸ ಮತ್ತೆ ಮಾಡಿದರೆ ಕೆಲಸ ಬಿಟ್ಟು ಮನೆಗೆ ಹೋಗ ಬೇಕಾಗುತ್ತದೆ ಎಂದು ಅವರು ಎಚ್ಚರಿಕೆ ನೀಡಿದರು. ರಾಮಲಿಂಗಮ್ ತಡಮಾಡದೆ ತಮ್ಮ ರಾಜೀನಾಮೆಯನ್ನು ನೀಡಿದರು.

ಇದಾದನಂತರ ಅವರ ತಂದೆ ಅದೇ ಊರಿನ ಪ್ರಾಥಮಿಕ ಶಾಲೆಯಲ್ಲಿ ಉಪಾಧ್ಯಾಯ ಹುದ್ದೆಯನ್ನು ಕೊಡಿಸಿದರು. ಅದೂ ಅವರಿಗೆ ಸಮಾಧಾನ ತರಲಿಲ್ಲ. ಆಗಾಗ್ಗ ರಾಜಕೀಯ ಸಭೆಗಳಲ್ಲಿ ಭಾಗವಹಿಸಿ ಕ್ರಾಂತಿಯನ್ನು ಕುರಿತು ಮಾತನಾಡಲು ಪ್ರಾರಂಭಿಸಿದರು. ಮೂರು ತಿಂಗಳು ಕಳೆಯಿತು. ರಾಜಕೀಯ ಭಾಷಣವಲ್ಲಿ ತೀವ್ರ ವಾದ ಅಭಿಪ್ರಾಯಗಳನ್ನು ಮಾತನಾಡಿದ ಕಾರಣಕ್ಕಾಗಿ ಮುಖ್ಯೋಪಾಧ್ಯಾಯರು ಅವರನ್ನು ಕೆಲಸದಿಂದ ವಜಾ ಮಾಡಿದರು. ನಂತರ ಅವರು ರಾಜಕೀಯ ಜೀವನಕ್ಕೆ ಧುಮುಕಿದರು. ಶ್ರೀಮಂತರ ಅದರಲ್ಲಿಯೂ ಮುಖ್ಯವಾಗಿ ಚೆಟ್ಟಿಯಾರರ ಭಾವಚಿತ್ರ ಗಳನ್ನು ಬರೆದು ಅವರು ಜೀವನ ನಿರ್ವಹಿಸಲು ಮೊದಲು ಮಾಡಿದರು.

## ನೊಳೆಯುವ ಕಲಾವಿದ

ಕವಿಯಾಗುವ ಮುನ್ನವೇ ರಾಮಲಿಂಗಮ್ ಅವರು ಪ್ರತಿಭಾವಂತ ಕಲಾವಿದ

ರಾಗಿದ್ದರು. ಬಾಲ್ಯದಿಂದಲೂ ಸಹಜವಾಗಿಯೇ ಅವರು ಚಿತ್ರ ಬರೆಯುವುದನ್ನು ಕವಿತೆ ಹೆಣೆಯುವುದನ್ನು ಮೈಗೂಡಿಸಿಕೊಂಡಿದ್ದರು. ಬೆಳೆಯುವ ಪೈರು ಮೊಳಕೆಯಲ್ಲಿಯೇ ಎಂಬ ನಾಣ್ಣುಡಿ ಅವರ ಜೀವನದಲ್ಲಿ ಯಥಾರ್ಥವಾಗಿದೆ. ಪ್ರಾಥಮಿಕ ತರಗತಿಯಲ್ಲಿ ಬರೆಯಬೇಕಾದ ಪಾಠಕ್ಕೆ ಬದಲಾಗಿ ತರಗತಿ ಉಪಾಧ್ಯಾಯರ ಚಿತ್ರವನ್ನೆ ಬರೆಯುತ್ತಿದ್ದಾಗ ಎಷ್ಟೋ ಸಲ ಸಿಕ್ಕಿಹಾಕಿಕೊಂಡದ್ದುಂಟು. ಸಹಜವಾಗಿ ಉಪಾಧ್ಯಾಯರು ಅವರನ್ನು ಬೈದರು. ಪ್ರೌಢಶಾಲೆಯಲ್ಲಿ ಹಾಗೆ ಮಾಡಿದಾಗ ಅವರ ಪ್ರತಿಭೆಗೆ ಮೊದಲನೆಯಬಾರಿ ಪುರಸ್ಕಾರ ದೊರೆಯಿತು. ಒಂದೇದಿನ ತರಗತಿಯಲ್ಲಿ ಪ್ರಿನ್ಸಿಪಾಲರ ವ್ಯಂಗ್ಯಚಿತ್ರ ಬರೆಯುತ್ತಿದ್ದಾಗ ಅವರ ಕಣ್ಣಿಗೆ ಬಿತ್ತು. ಪ್ರಿನ್ಸಿಪಾಲ ಎಂ॥ ಎಲಿಯಟ್ ಹುಡುಗನ ಪ್ರತಿಭೆಯನ್ನು ಮೆಚ್ಚಿ ಹೊಗಳಿದ್ದು ಮಾತ್ರವಲ್ಲದೆ ಚಿನ್ನದ ಮುಲಾಮಿದ್ದ ಒಂದು ಪೆನ್ಸಿಲನ್ನು ಬಹುಮಾನವಾಗಿ ನೀಡಿದರು.

ಎಲಿಯಟ್ ಮುಖಾಂತರ ಇಂತಹ ಪ್ರತಿಭೆಯನ್ನು ತಿಳಿದ ಸಿಂಪ್ಸನ್ ಎಂಬ ಒಬ್ಬ ಇಂಜಿನಿಯರ್ ಮರಣ ಹೊಂದಿದ ಅವರ ಮಗುವಿನ ಚಿತ್ರವನ್ನು ಬರೆದುಕೊಡುವಂತೆಯೂ ಅದಕ್ಕಾಗಿ ಐವತ್ತು ರೂಪಾಯಿಗಳನ್ನು ಕೊಡುವುದಾಗಿ ಕೇಳಿಕೊಂಡರು. ಪೂರ್ಣವಾದ ಚಿತ್ರವನ್ನು ಕಂಡನಂತರ ಚಿತ್ರಕಾರನ ಪ್ರತಿಭೆಗೆ ಮಾರುಹೋದ ಅವರು ತಮ್ಮ ಕಿಸೆಯಲ್ಲಿದ್ದ ದುಡ್ಡಿನ ಚೀಲವನ್ನು ಇಡಿಯಾಗಿ ಕೊಟ್ಟುಬಿಟ್ಟರು. ಅದರಲ್ಲಿದ್ದ ಮೊತ್ತ ಒಟ್ಟು ಆರುನೂರ ಎಪ್ಪತ್ತೈದು ರೂಪಾಯಿಗಳು. ಇದು ಮೊಳೆಯುವ ಕಲಾವಿದನಿಗೆ ನಿಜವಾಗಿ ಆಶ್ಚರ್ಯವಾದರೂ ಪ್ರೋತ್ಸಾಹದಾಯಕವಾಗಿತ್ತು. ಮುಂದೆ ಅವರು ಉಪಾಧ್ಯಾಯ ವೃತ್ತಿಯನ್ನು ಕಳೆದುಕೊಂಡಾಗ ವರ್ಣಚಿತ್ರ ಬರೆಯುವುದನ್ನು ಒಂದು ಮುಖ್ಯ ವೃತ್ತಿಯಾಗಿಯೇ ರೂಢಿ ಮಾಡಿಕೊಂಡರು.

ಕಲಾವಿದರಾಗಿ ಅವರ ಪ್ರಖ್ಯಾತಿ ತಮಿಳುನಾಡಿನ ನಾನಾ ಪ್ರದೇಶಗಳಿಗೆ ಮುಖ್ಯವಾಗಿ ಶ್ರೀಮಂತ ವ್ಯಾಪಾರಿಗಳ ನೆಲೆವೀಡಾದ ಚೆಟ್ಟಿನಾಡಿನಾದ್ಯಂತ ಹಬ್ಬಿತು. ಕೆಲವು ಚೆಟ್ಟಿಯಾರುಗಳು ತಮ್ಮ ಚಿತ್ರವನ್ನು ಇಲ್ಲವೆ ತಮ್ಮ ಹಿಂದಿನವರ ಚಿತ್ರಗಳನ್ನು ಬರೆದುಕೊಡುವಂತೆ ಕೇಳುತ್ತಿದ್ದರು. ಒಂದು ಸಾವಿರ ರೂಪಾಯಿಗಳಿಗೆ ಕಡಿಮೆಯಿಲ್ಲದಂತೆ ಅವರು ಪ್ರತಿ ಚಿತ್ರಕ್ಕೂ ಪ್ರತಿಫಲ ಕೊಡುತ್ತಿದ್ದರು. ಒಮ್ಮೆ ಚೆಟ್ಟಿಯಾರೊಬ್ಬರ ಹೆಂಡತಿ ಒಪ್ಪಿಗೆಯಾದ ಹಣಕ್ಕಿಂತ ಸ್ವಲ್ಪ ಕಡಿಮೆ ಮೊತ್ತವನ್ನು ಗತಿಸಿದ ತಮ್ಮ ಪತಿಯ ಚಿತ್ರಕ್ಕಾಗಿ ಕೊಡಲು ಮುಂದೆ ಬಂದರು. ಅವನ್ನು ತಿರಸ್ಕರಿಸಿದ ಚಿತ್ರಕಾರರು ತಾವು ಬರೆವ ಚಿತ್ರವನ್ನು ತೆಗೆದುಕೊಂಡು ಹೊರಗೆ ಹೋಗಲು ಹೆಜ್ಜೆ ಮುಂದಿಟ್ಟರು. ಆಗತಾನೆ ಬೀಸಿದ ಗಾಳಿಯಿಂದ ಚಿತ್ರದ ಬಳಿಯಿದ್ದ ಊದುಬತ್ತಿ ಬಟ್ಟಲು ಅಕಸ್ಮಾತ್ ಬಿದ್ದುಹೋಯಿತು. ಅದನ್ನು ಕಂಡ ನಮ್ಮ ಕವಿವರ್ಯರು, "ನೋಡಿದಿರಾ! ಧಾರಾಳವಾಗಿ ಆಸ್ತಿಯನ್ನು ಬಿಟ್ಟುಹೋಗಿರುವವರ ಚಿತ್ರ ಬರೆಸುವುದಕ್ಕೂ ಜಿಪುಣತನ ತೋರಿಸುತ್ತಿರುವ ನಿಮ್ಮ ಮೇಲೆ ನಿಮ್ಮ ಯಜಮಾನರಿಗೆ ಕೋಪ ಬಂದಿದ" ಎಂದು

ಸಮಯೋಚಿತವಾಗಿ ಒಂದು ಮಾತಿನ ಬಾಣ ಬಿಟ್ಟರು. ಭಯಗೊಂಡು ಆಕೆ ಕೊಡಬೇಕಾದ ಹಣಕ್ಕಿಂತಲೂ ಒಂದು ನೂರು ರೂಪಾಯಿಗಳನ್ನು ಹೆಚ್ಚಾಗಿಯೆ ಕೊಟ್ಟರು.

ಚಿತ್ರಗಳನ್ನು ಅವರು ಹಣಕ್ಕೆ ಮಾತ್ರವಲ್ಲದೆ ತಮ್ಮ ಸಂತೋಷಕ್ಕಾಗಿಯೂ ಬರೆಯುತ್ತಿದ್ದದುಂಟು. ಶ್ರೀ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ತಿಲಕ್, ಗೋಖಲೆ, ಗಾಂಧೀಜಿ ಮುಂತಾದ ಚಿತ್ರಗಳನ್ನು ಬರೆದು ನಾಮಕ್ಕಲ್, ಸೇಲಮ್, ಕರೂರು ಮುಂತಾದ ಪೌರಸಭೆಗಳಿಗೆ ದಾನಮಾಡಿದ್ದಾರೆ. ಅವುಗಳನ್ನು ಈಗಲೂ ಗೋಡೆಯ ಮೇಲೆ ಕಾಣಬಹುದು. ಕಾಲಾನಂತರ ಛಾಯಾಚಿತ್ರವನ್ನು ಕಲಿತ ಅವರು ಅದನ್ನು ಒಂದು ಉದ್ಯೋಗವನ್ನಾಗಿ ಅಭ್ಯಾಸ ಮಾಡಿದರು. ಚಿತ್ರಗಳನ್ನು ದೊಡ್ಡದು ಮಾಡಬೇಕಾದ ಸಂದರ್ಭ ಬಂದಾಗ ಅವರ ಕಲಾಪ್ರತಿಭೆಯನ್ನು ಸಾಕಷ್ಟು ಚೆನ್ನಾಗಿ ಉಪಯೋಗಿಸಿಕೊಂಡರು. ಹಾಗೆ ದೊಡ್ಡದು ಮಾಡಿದ ಚಿತ್ರಗಳಿಗಿಂತಲೂ ಪೆನ್ಸಿಲಿನಲ್ಲಿ ತಾವು ಬರೆವ ಕಪ್ಪು ಬಿಳುಪು ಚಿತ್ರಗಳು ಚೆನ್ನಾಗಿರುತ್ತಿದ್ದವು ಎಂದು ಅವರು ತಮ್ಮ ಆತ್ಮಚರಿತ್ರೆಯಲ್ಲಿ ಹೇಳುತ್ತಾರೆ. ರಾಜಕೀಯಕ್ಕೆ ಪ್ರವೇಶ ಮಾಡಿದ ನಂತರ ಭಾವಚಿತ್ರಗಳನ್ನು ಚಿತ್ರಿಸುವುದನ್ನೂ, ಛಾಯಾಚಿತ್ರದ ವೃತ್ತಿಯನ್ನೂ ಅವರು ನಿಲ್ಲಿಸಿದರು. ನಂತರ ಅವರ ಕಲಾವಿದನ ಪ್ರತಿಭೆ ಕಾವ್ಯದ ಮೂಲಕ ಚೆನ್ನಾಗಿ ಅಭಿವ್ಯಕ್ತಗೊಂಡಿರುವುದನ್ನು ನಾವು ಕಾಣಬಹುದು.

## ಅರಳುವ ಕವಿಪ್ರತಿಭೆ

ಬಾಲ್ಯದಿನಗಳಲ್ಲಿಯೇ ರಾಮಲಿಂಗಮ್ ಅವರು ತಮ್ಮಲ್ಲಿದ್ದ ಕಾವ್ಯಪ್ರತಿಭೆಯನ್ನು ತೋರಿಸಿದರು. ಬೀದಿ ನಾಟಕಗಳನ್ನು ಆಗಾಗ್ಗ ನೋಡುತ್ತಿದ್ದ ಅವರು ಅವುಗಳಲ್ಲಿನ ಹವ್ಯಾಸಿ ಕಲಾವಿದರ ಪಾತ್ರಗಳನ್ನು ಕಂಡು ಸಂತಸ ಪಡುತ್ತಿದ್ದರು. ನಾಟಕಗಳಲ್ಲಿ ವಿದೂಷಕನು ಮಧ್ಯೆ ಮಧ್ಯೆ ಲಘು ಗೀತೆಗಳನ್ನು ಹಾಡುತ್ತಾ ಪ್ರೇಕ್ಷಕರು ಮಾಡುತ್ತಿದ್ದ ಗಲಭೆಯನ್ನು ಅಡಗಿಸುತ್ತಿದ್ದುದು ಸಾಮಾನ್ಯ ರೂಢಿ. ಅಂತಹ ಒಂದು ಲಘುಗೀತೆ :

"ಕೂತ್ತು ಪಾರ್ಕ ವಂದೀಂಗಳಾ, ಇಂಗು
ಕಾಸಲಮ್ ಪೇಸ ವಂದೀಂಗಳಾ ?"

(ಆಟ ನೋಡಲು ಬಂದಿರಾ ಇಲ್ಲಿ, ಹರಟೆ ಹೊಡೆಯಲು ಬಂದಿರಾ?)

ಒಂದೊಂದಿನ ಬೀದಿನಾಟಕ ನೋಡಿ ರಾತ್ರಿ ಹೊತ್ತಾದ ನಂತರ ಮನೆಗೆ ಹಿಂತಿರುಗಿದಾಗ ಅವರ ಅಕ್ಕ, ನಾದಿನಿ ಏನೋ ವಾಗ್ವಾದ ನಡೆಸುತ್ತಾ ಗಟ್ಟಿಯಾಗಿ ಮಾತನಾಡುತ್ತಿದ್ದರೇ ಹೊರತು ಹಸಿದು ಬಂದಿದ್ದ ಅವರಿಗೆ ಊಟ ಬಡಿಸಲಿಲ್ಲ. ಬೀದಿನಾಟಕದಲ್ಲಿ ಅವರು ಆಗತಾನೆ ಕೇಳಿದ್ದ ಮೇಲೆ ಹೇಳಿದ ಹಾಡನ್ನು ಪ್ರಾಸದಲ್ಲಿಯೆ ಒಂದು ಚುಟುಕ ರಚಿಸಿ ಗಟ್ಟಿಯಾಗಿ ಹಾಡಲು ಪ್ರಾರಂಭಿಸುತ್ತಾರೆ :

"ಚಾದಮ್ ಪೋಡ ವಂದೀಂಜಗಳಾ, ಇಂಜಾ
ಚಂಡೈ ಪೋಡ ವಂದೀಂಜಗಳಾ ?"
(ಊಟ ಹಾಕಲು ಬಂದಿರಾ, ಇಲ್ಲಿ ಜಗಳ ಕಾಯಲು ಬಂದಿರಾ ?)

ಇದನ್ನು ಕೇಳಿದ ಕೂಡಲೇ ಆ ಹೆಂಗಸರಿಬ್ಬರೂ ನಾಚಿಕೆಯಿಂದ ಊಟಬಡಿಸಲು ಮೇಲೆದ್ದು ಬಂದರು.

ಅನೇಕ ಪ್ರವಾಸಿ ನಾಟಕ ಕಂಪನಿಗಳಿಗೆ ಅವರು ಅಂದಿನ ದಿನಗಳಲ್ಲಿ ಹಾಡುಗಳನ್ನು ಬರೆದುಕೊಟ್ಟರು. ತಮಿಳುನಾಡಿನ ಪ್ರಸಿದ್ಧ ನಾಟಕಕಾರರೂ, ಹಾಡುಗಾರರೂ ಆಗಿದ್ದ ಕಿಟ್ಟಪ್ಪ ಅವರ ನಾಟಕ ಕಂಪನಿ ನಾಮಕ್ಕಲ್‌ನಲ್ಲಿ ಸುಮಾರು ಎರಡೂವರೆ ವರ್ಷಗಳ ಕಾಲ ಬೀಡುಬಿಟ್ಟಿತ್ತು. ಆ ಕಂಪನಿಯವರ ಬಹುಮಂದಿನ ನಾಟಕಗಳ ಎಲ್ಲಾ ಪಾತ್ರಗಳಿಗೂ ರಾಮಲಿಂಗಮ್ ಅವರು ಹಾಡುಗಳನ್ನು ಬರೆದುಕೊಟ್ಟಿದ್ದಾರೆ. ಹಾಗೆ ರಚಿಸಿದ ಗೀತೆಗಳಲ್ಲಿ ನಾಮಗಿರಿಯ ಆರಾಧ್ಯ ದೇವತೆಯನ್ನು ಕುರಿತು ಸ್ತುತಿಸುವ ಪ್ರಾರ್ಥನಾಗೀತೆ ಬಹು ಜನಪ್ರಿಯತೆ ಪಡೆದು ಪ್ರೇಕ್ಷಕರನ್ನು ಆಕರ್ಷಿಸಿತು. ನಂತರ ಅವ್ವೈ ಷಣ್ಮುಗಮ್ ಅವರ ಮುಖಂಡತ್ವದಲ್ಲಿ ನಡೆಯುತ್ತಿದ್ದ ಬಾಲಕರ ನಾಟಕ ಕಂಪನಿಗೆ ಹಲವು ಗೀತೆಗಳನ್ನು ರಚಿಸಿಕೊಟ್ಟರು. ಕೆಲ ಕಾಲಾನಂತರ ವಿಧಾನ ಪರಿಷತ್ತಿನ ಸದಸ್ಯರಾಗಿ ಆಯ್ಕೆಯಾದ ಅವ್ವೈ ಅವರು ತಮಿಳು ನಾಟಕಗಳ ಬಗೆಗೆ ಅವರು ಬರೆದಿರುವ ಪುಸ್ತಕವೊಂದರಲ್ಲಿ ರಾಮಲಿಂಗಮ್ ಅವರ ಕವಿತಾ ಪ್ರತಿಭೆಯನ್ನು, ರಂಗ ಗೀತೆಗಳನ್ನು ರಚಿಸುವುದರಲ್ಲಿ ಅವರಿಗಿದ್ದ ನೈಪುಣ್ಯವನ್ನು ಮನಸಾರೆ ಕೊಂಡಾಡಿದ್ದಾರೆ. ರಾಮಲಿಂಗಮ್ ಅವರು ಅಂತಹ ಸಾವಿರಾರು ಗೀತೆಗಳನ್ನು ರಚಿಸಿದ್ದು ಅವೆಲ್ಲವೂ ರಾಜಕೀಯ ನಿರ್ಬಂಧದ ಕಾಲಾವಧಿಯಲ್ಲಿ ಕಳೆದುಹೋದುವೆಂದು ನೆನಪು ಮಾಡಿ ಕೊಳ್ಳುತ್ತಾರೆ.

ಹೀಗೆ ಅವರು ರಚಿಸಿದ್ದ ಒಂದು ರಾಮಾಯಣದ ಗೀತೆ ಮಹಾಕವಿ ಭಾರತಿಯಾರರ ಮೆಚ್ಚುಗೆ ಗಳಿಸಿತು. ಆ ರಾಮಾಯಣದ ಗೀತೆಯಲ್ಲಿ ಅಕಸ್ಮಾತಾಗಿ ದೇಶಪ್ರೇಮದ ಭಾವ ತುಂಬಿ ತುಳುಕಾಡಿತ್ತು. ಅನಂತರ ತಾವಾಗಿಯೇ ಅನೇಕ ದೇಶಭಕ್ತಿ ಗೀತೆಗಳನ್ನು ಅವರು ರಚಿಸಿದರು.

ತೂತ್ತುಕುಡಿಗೆ ಸೇರಿದ ಕಾಂಗ್ರೆಸ್ ಕಾರ್ಯಕರ್ತರು ಒಮ್ಮೆ ಉತ್ತಮ ದೇಶಭಕ್ತಿ ಗೀತೆಗಳನ್ನು ರಚಿಸಿದವರಿಗಾಗಿ ಐನೂರು ರೂಪಾಯಿಗಳು ಹಾಗೂ ಚಿನ್ನದ ಪದಕವನ್ನು ಬಹುಮಾನವಾಗಿ ಘೋಷಿಸಿ ಒಂದು ಕವಿತಾ ಸ್ಪರ್ಧೆಯನ್ನು ಏರ್ಪಡಿಸಿದರು. ಈ ಸ್ಪರ್ಧೆಗಾಗಿ ಕವಿವರ್ಯರು ಸಮುದಾಯ ನೃತ್ಯ 'ಕುಮ್ಮಿ' ಎಂಬ ಹೆಸರಿನ ಜನಪ್ರಿಯ ವಾದ ಒಂದು ನೂರು ಪದ್ಯಗಳನ್ನು ಕಳುಹಿಸಿದರು. ಇವೆಲ್ಲವೂ ಶ್ಲೇಷಾಲಂಕಾರದಲ್ಲಿ ರಚಿತವಾಗಿದ್ದ ಪದ್ಯಗಳು. ಇದರಲ್ಲಿದ್ದ ಅನೇಕ ಪದ್ಯಗಳು ದ್ವಂದ್ವಾರ್ಥಗಳಿಂದ ಕೂಡಿದ್ದುವು. ಅಲ್ಲಿನ ವ್ಯವಸ್ಥಾಪಕರಿಗೆ ತುಂಬಾ ಮೆಚ್ಚುಗೆಯಾಯಿತು. ಆದರೆ

ಪ್ರಾರ್ಥನಾ ಪದ್ಯದಲ್ಲಿ ಮಾರ್ಮಿಕವಾಗಿ ಅನೇಕ ಸ್ವಾತಂತ್ರ್ಯ ಹೋರಾಟಗಾರರ ಹೆಸರು ಗಳನ್ನು ಸೇರಿಸಲಾಗಿತ್ತು. ಹೀಗೆ ಬಾಲಗಂಗಾಧರ ತಿಲಕರನ್ನು ವಿಷಕಂಠನಾದ ಶಿವನಿಗೆ ಹೋಲಿಸಿ ಹೊಗಳಲಾಗಿತ್ತು. ಗೋಖಲೆಯವರನ್ನು ಕೌರವರ ಸಭೆಗೆ ಸಂಧಾನಕ್ಕಾಗಿ ಹೋಗುವ ಧರ್ಮಿಷ್ಠ ಪಾಂಡವರ ಪಕ್ಷಪಾತಿ ಶ್ರೀಕೃಷ್ಣನಿಗೆ, ಅರವಿಂದರನ್ನು ಬ್ರಹ್ಮ ನಿಗೆ, ತನ್ನ ತಂದೆಗೆ ಗುರುವಾದ ಸ್ಕಂಧನಿಗೆ ಗಾಂಧೀಜಿಯವರನ್ನು ಹೋಲಿಸಲಾಗಿತ್ತು. ವ್ಯವಸ್ಥಾಪಕರು ಮಿತವಾದಿಗಳಾಗಿದ್ದರು. ಈ ಕಾರಣದಿಂದ ತಿಲಕ್, ಅರವಿಂದರು ಮುಂತಾದ ತೀವ್ರವಾದಿಗಳ ಹೆಸರುಗಳನ್ನು ತೆಗೆದುಹಾಕುವಂತೆ ಕವಿವರ್ಯರಿಗೆ ಸಲಹೆ ಮಾಡಿದರು. ಹೀಗೆ ಬದಲಾಯಿಸಲು ರಾಮಲಿಂಗಮ್ ಅವರು ಇಷ್ಟಪಡಲಿಲ್ಲ. ಆದರಿಂದಾಗಿ ಅವರ ಪದ್ಯಗಳು ಬಹುಮಾನ ಗಳಿಸಲಿಲ್ಲ. ಇದೇ ಪದ್ಯಗಳನ್ನು ಸೇಲಂ ನಗರದ ಸಾಹಿತ್ಯ ಸಂಘದಲ್ಲಿ ವಾಚಿಸಿದಾಗ ಧೀರ ದೇಶಭಕ್ತರಾದ ಅನಂತಾಚಾರಿಯರ್, ರಾಜಗೋಪಾಲಾಚಾರಿಯರ್ ಮುಂತಾದವರು ಅಪಾರ ಮೆಚ್ಚುಗೆ ಸೂಚಿಸಿ ಇಂತಹ ಇನ್ನಷ್ಟು ಪದ್ಯಗಳನ್ನು ಬರೆಯಲು ಪ್ರೋತ್ಸಾಹಿಸಿದರು. ವಿಜಯರಾಘವಾಚಾರಿಯರ್ ರಾಮಲಿಂಗಮ್ ಅವರಿಗೆ 'ಪುಲವನ್' (ಕವಿ) ಎಂಬ ಬಿರುದನ್ನು ನೀಡಿದರು.

1924 ರಲ್ಲಿ ಎಸ್. ಶ್ರೀನಿವಾಸ ಐಯಂಗಾರ್ ಎಂಬ ಕಾಂಗ್ರೆಸ್ ಧುರೀಣರು ಏರ್ಪಡಿಸಿದ್ದ ದೇಶಭಕ್ತಿ ಗೀತೆಗಳ ಸ್ಪರ್ಧೆಯಲ್ಲಿ ರಾಮಲಿಂಗಮ್ ಅವರಿಗೆ ಚಿನ್ನದ ಪದಕ ದೊರೆಯಿತು.

ಅಪಾರ ಪರೋಪಕಾರಿಯಾಗಿದ್ದ ರಾಮಲಿಂಗಮ್ ಅವರು ಬಡಬಗ್ಗರ ಹಿತ ಬೋಧೆಗಾಗಿ ಕೆಲವು ಪದ್ಯಗಳನ್ನು ರಚಿಸಿದ್ದಾರೆ. 1924 ರಲ್ಲಿ ಆರೋಗ್ಯ ಮತ್ತು ನಿರ್ಮಲೀಕರಣ ಕುರಿತು ಆರೋಗ್ಯ ಸಪ್ತಾಹಕ್ಕಾಗಿ ಕೆಲವು ಹಾಡುಗಳನ್ನು, ಸಂಭಾಷಣೆ ಯನ್ನು ಬರೆದುಕೊಡುವಂತೆ ಅವರ ಸ್ನೇಹಿತ, ಆರೋಗ್ಯಾಧಿಕಾರಿ ಪಿ. ಕುಂಞರಾಮನ್ ನಾಯರ್ ಅವರ ಕೋರಿಕೆಯಂತೆ ಬರೆದುಕೊಟ್ಟರು. ಎನ್. ಕೆ. ತಂಬಿ ಎಂಬ ಆರೋಗ್ಯಾಧಿಕಾರಿ ಇವರ ಹಾಡುಗಳನ್ನು ಮೆಚ್ಚಿ ಕೂಡಲೆ ಇಲಾಖೆಯ ವತಿಯಿಂದ ಪರಿಪತ್ರ ಹೊರಡಿಸಿ ಹಾಡುಗಳ ಪ್ರಚಾರ ಮಾಡಿಸಲು ಪ್ರಾರಂಭಿಸುತ್ತಾರೆ. ಅವರ ಕೋರಿಕೆಯಂತೆ 'ಅರಿವನ್ನೈ-ಸುಂದರಮ್' ಎಂಬ ಒಂದು ಸಣ್ಣ ಸುಖಾಂತ ನಾಟಕವನ್ನು ಬರೆದುಕೊಟ್ಟರು. ಅದರಲ್ಲಿ ಆರೋಗ್ಯಕರ ಜೀವನ ಹೇಗಿರಬೇಕು, ಮಕ್ಕಳ ಪೋಷಣೆ, ಗರ್ಭಿಣಿ ಸ್ತ್ರೀಯರ, ರೋಗಿಗಳ ಅದರಲ್ಲೂ ಪ್ರತ್ಯೇಕವಾಗಿ ಸಾಂಕ್ರಾಮಿಕ ರೋಗಿಗಳ ಚಿಕಿತ್ಸೆ, ಆರೈಕೆ ಹೇಗಿರಬೇಕು ಮುಂತಾದ ವಿಚಾರಗಳನ್ನು ಕುರಿತು ಜನಸಾಮಾನ್ಯರಿಗೆ ಒಳ್ಳೆಯ ತಿಳಿವಳಿಕೆ ನೀಡಿದ್ದಾರೆ. ಕುತೂಹಲವೆಂದರೆ ಶಾಲಾಮಕ್ಕಳಿಗೆ ಹಾಡಲು ಇಂಗ್ಲಿಷಿನಲ್ಲಿಯೂ ಒಂದು ಹಾಡನ್ನು ಅವರು ರಚಿಸಿದ್ದಾರೆ. ಅದು ಹೀಗೆ ಪ್ರಾರಂಭವಾಗುತ್ತದೆ :

Health is Wealth—mere
Wealth is faith.
(ಆರೋಗ್ಯವೆ ಭಾಗ್ಯ. ಆರೋಗ್ಯವಿಲ್ಲದ ಭಾಗ್ಯ ಅದೇಸಿದ್ದರೂ ಹೊಲಸು)

ಬಹುಶಃ ಅವರು ಇಂಗ್ಲಿಷಿನಲ್ಲಿ ರಚಿಸಿದ ಕವಿತೆ ಇದೊಂದೆ. ಹೀಗೆ ಅವರ ಕವಿತಾ ಪ್ರತಿಭೆ ಕ್ರಮೇಣ ಬೆಳೆಯುತ್ತಾ ಬಂತು. ಕಂಪನಿ ನಾಟಕಗಳಿಗೆ ಹಾಗೂ ಪುರ ಸಭೆಗಳಿಗೆ ಪದ್ಯಗಳನ್ನು ರಚಿಸಿಕೊಡುತ್ತಿದ್ದ ಕಾಲದಲ್ಲಿ ಅಂಕುರಗೊಂಡ ಅವರ ಕವಿತಾ ಪ್ರತಿಭೆ ರಾಷ್ಟ್ರೀಯ ಹೋರಾಟದಲ್ಲಿ ಮುಳುಗಿದಾಗ ಪೂರ್ಣವಾಗಿ ಅರಳಲು ಪ್ರಾರಂಭವಾಯಿತು. ಗಾಂಧೀಜಿಯವರ ಬಗೆಗೆ ಅವರಿಗಿದ್ದ ಅಪಾರ ಭಕ್ತಿ ಕವಿಪ್ರತಿಭೆಗೆ ಮತ್ತಷ್ಟು ಚೇತನ ಮತ್ತು ಆಯಾಮ ದೊರಕಿಸಿಕೊಟ್ಟಿತು.

1930 ರಲ್ಲಿ ಅವರ ಕೀರ್ತಿ ಎಲ್ಲೆಡೆಗೂ ಹಬ್ಬಿ ಅವರು 'ದೇಶಭಕ್ತ ಕವಿ' ಎಂದು ಪ್ರಖ್ಯಾತರಾದರು. ಗಾಂಧೀಜಿಯವರ ದಂಡಿ ಉಪ್ಪು ಸತ್ಯಾಗ್ರಹದ ರೀತಿಯಲ್ಲಿ ತಮಿಳುನಾಡಿನ ಯುವಕರು ತಿರುಚಿಯಿಂದ ವೇದಾರಣ್ಯಮ್‌ವರೆಗೆ ಮೆರವಣಿಗೆ ನಡೆಸಿದರು. ಈ ಮೆರವಣಿಗೆ ತಿರುಚಿಯ ಡಾ|| ರಾಜನ್ ಅವರ ಮನೆಯಿಂದ ರಾಜಾಜಿಯವರ ನೇತೃತ್ವದಲ್ಲಿ ಹೊರಟಿತು. ದೂರದ ಈ ದಾರಿಯುದ್ದಕ್ಕೂ ಸ್ಫೂರ್ತಿದಾಯಕವಾಗಿ ಹಾಡಲು ಒಂದು ಉತ್ತಮ ದೇಶಭಕ್ತಿಗೀತೆ ಬೇಕಾಗಿತ್ತು. ಇದಕ್ಕಾಗಿ ರಾಮಲಿಂಗಮ್ ಅವರು ಗಾಂಧಿತತ್ವಗಳನ್ನೊಳಗೊಂಡ ಒಂದು ದೇಶಭಕ್ತಿ ಗೀತೆಯನ್ನು ರಚಿಸಿಕೊಟ್ಟರು. ಅದರ ಒಂದೆರಡು ಚರಣಗಳನ್ನು ಹೀಗೆ ಅನುವಾದ ಮಾಡಬಹುದು :

ಕತ್ತಿಯಿಲ್ಲ ರಕ್ತವಿಲ್ಲ, ಯುದ್ಧವೊಂದು ಬರುತಿದೆ
ಸತ್ಯವಂತ ನಿತ್ಯನಿರತರೆಲ್ಲ ಬಂದು ಸೇರಿರಿ
ಮದ್ದುಗುಂಡು ಕೋವಿ ಕಠಾರಿ ಸಾವು ನೋವು ಸಲ್ಲ
ಯುದ್ಧವೊಂದು ಲೋಕಕ್ಕಿದುವೆ ಹೊಚ್ಚ ಹೊಸದು ಎಲ್ಲ

ಹೃನ್ಮನ ಕಲಕುವ ಈ ಪದ್ಯಗಳನ್ನು ಕೇಳಿ ರಾಜಾಜಿಯವರು ಪುಳಕಿತರಾಗಿ ಹೀಗೆ ಹೇಳುತ್ತಾರೆ, "ಇಂತಹ ಉತ್ಕಟ ಪರಿಸ್ಥಿತಿಯಲ್ಲಿ ನಮ್ಮನ್ನು ಚೇತರಿಸಲು ಮಹಾಕವಿ ಭಾರತಿಯಾರ್ ನಮ್ಮ ಮಧ್ಯೆ ಇಲ್ಲವೆಂಬ ವ್ಯಥೆ ನಮಗಿತ್ತು. ಆದರೆ ಆ ಕೊರತೆಯನ್ನು ತುಂಬಲು ನಮ್ಮ ಮಧ್ಯೆ ಈಗ ನಾಮಕ್ಕಲ್ ಕವಿ ಇದ್ದಾರೆ ಎಂಬ ವಿಚಾರ ಸಮಾಧಾನ ತಂದಿದೆ. ತಿಲಕರು ಬಿತ್ತಿದ ಬೀಜ ಭಾರತಿಯಾರರಾಗಿ ಮೊಳೆದರೆ ಗಾಂಧೀಜಿಯವರು ಹರಡಿದ ಬೀಜ ನಾಮಕ್ಕಲ್ ಕವಿಯಾಗಿ ಬೆಳೆಯಿತು."

'ಸುತಂತ್ರ ಶಂಕು' (ಸ್ವಾತಂತ್ರ್ಯ ಶಂಖು) ಎಂಬ ದೇಶಭಕ್ತ ಪತ್ರಿಕೆಯ ಸಂಪಾದಕ

ಸಾ. ಗಣೇಶನ್ ಅವರು ಈ ಹಾಡಿನ ಪ್ರತಿಗಳನ್ನು ಲಕ್ಷಗಟ್ಟಲೆ ಮುದ್ರಿಸಿ ಕಾಂಗ್ರೆಸ್ ಸ್ವಯಂಸೇವಕರಿಗೆ ಹಂಚಿದರು. ಸಾರ್ವಜನಿಕ ಸಭೆಗಳಲ್ಲಿ ಈ ಹಾಡನ್ನು ಭಾವ ಪರವಶತೆಯಿಂದ ಹಾಡಿ ಹೊಗಳಲಾಯಿತಲ್ಲದೆ ಕವಿವರ್ಯರು ರಾಷ್ಟ್ರಕವಿಯೆಂದೂ ಕೊಂಡಾಡಿದರು.

## ಆದರ್ಶ ಕುಟುಂಬಿ

ಈಗಾಗಲೆ ನಾವು ತಿಳಿದಂತೆ ತಂದೆಯವರ ಒತ್ತಾಯದಂತೆ ಕವಿ ತಮಗೆ ಇಷ್ಟವಿಲ್ಲದ ಹೆಣ್ಣೊಂದನ್ನು ಕೈಹಿಡಿದಿದ್ದರು. ಈ ಕಾರಣದಿಂದ ಮನಃಪೂರ್ವಕವಾಗಿ ಆಕೆಯನ್ನು ಅವರು ಪ್ರೀತಿಸಲಿಲ್ಲ. ಗಂಡ ಹೆಂಡಿರಾಗಿ ಅವರು ಒಂದೆಡೆ ವಾಸಿಸಲಿಲ್ಲ; ಬೇರೆ ಬೇರೆಯೇ ಇದ್ದರು. ಹೀಗಿದ್ದರೂ ತಾಳ್ಮೆಯ ಮೂರ್ತಿಯಂತಿದ್ದ ಆಕೆ ಪತಿಯ ನಿರ್ಲಕ್ಷ್ಯವನ್ನು ಬಹಳ ಕಾಲ ಪ್ರಸ್ತಾಪಿಸಲಿಲ್ಲ. ತಾಳ್ಮೆಯ ಕಟ್ಟೆ ಒಡೆದು ಒಂದು ಸಲ ಪ್ರಸ್ತಾಪಿಸಬೇಕಾದ ಹಂತ ಬಂದೊದಗಿತ್ತು. ಒಂದು ದಿನ ತನ್ನ ಪತಿಯ ಹಾಸಿಗೆಯ ಮೇಲೆ ಹೋಗಿ ಮಲಗಿದರು. ರಾತ್ರಿ ಬಹಳ ಹೊತ್ತಾದ ನಂತರ ನಾಟಕ ಮುಗಿಸಿ ಕೊಂಡು ಬಂದ ಪತಿಯನ್ನು ಕೋರಿ ತನ್ನನ್ನು ಪತ್ನಿಯಂತೆ ನಡೆಸಿಕೊಳ್ಳುವಂತೆ ಒತ್ತಾಯಿಸಿದರು. ಅವರ ಹೃದಯ ಕರಗಿ ಅಂದಿನಿಂದ ಅವರಿಬ್ಬರೂ ದಾಂಪತ್ಯ ಜೀವನ ನಡೆಸಿದರು. ಹದಿನೈದು ವರ್ಷಗಳಾದರೂ ಅವರಿಗೆ ಸಂತಾನವಾಗಲಿಲ್ಲ. ಆದ್ದರಿಂದ ಅವರ ತಂದೆ ರಾಮಲಿಂಗಮ್ ಅವರಿಗೆ ಮೊದಲನೆಯ ಪತ್ನಿಯ ತಂಗಿಯನ್ನು ಮದುವೆಯಾಗುವಂತೆ ಸೂಚಿಸಿದರು. ತಮಗೆ ಏಕಪತ್ನಿತ್ವದಲ್ಲಿ ನಂಬಿಕೆಯಿರುವುದಾಗಿ ಹೇಳಿ ಅವರ ಸಲಹೆಯನ್ನು ನಿರಾಕರಿಸಿದರು. ಕೊನೆಗೆ ಅವರ ಪತ್ನಿಯೂ ಒತ್ತಾಯ ಪಡಿಸಲು ಪ್ರಾರಂಭಿಸಿದರು. ಕೋಪಗೊಂಡ ರಾಮಲಿಂಗಮ್ ಅವರು, "ನೀನು ಜೀವಂತವಾಗಿರುವವರೆಗೂ ನಾನು ಕನಸಿನಲ್ಲಿಯೂ ಇನ್ನೊಬ್ಬ ಹೆಂಗಸನ್ನು ಹಾಗೆ ಭಾವಿಸಲಾರೆ, ನೀನು ಹೋಗಿ ಸುಮ್ಮನೆ ಮಲಗು," ಎಂದು ಖಂಡತುಂಡವಾಗಿ ಹೇಳಿದರು. ಅದಕ್ಕೆ ಅವರ ಪತ್ನಿ, "ನೀವು ಹಾಗೆಯೆ ಮಾಡಿ, ನಾನು ಪ್ರಾಣಬಿಟ್ಟ ಮೇಲಾದರೂ ನನ್ನ ತಂಗಿಯನ್ನು ಮದುವೆಯಾಗಿ" ಎಂದರು. ಮುತ್ತಮ್ಮಾಳ್ ತಾವು ಹೇಳಿದ ರೀತಿಯಲ್ಲಿಯೇ ನಡೆದುಕೊಂಡಿದ್ದರು. ಮಾರನೆಯ ಬೆಳಿಗ್ಗೆ ಯಾವುದೋ ಹೊಟ್ಟೆನೋವು ನೆವದಿಂದ ಸ್ವಲ್ಪಕಾಲ ನರಳಿ ಇಹಲೋಕ ತ್ಯಜಿಸಿದರು (1924). ತಮ್ಮ ಪತ್ನಿಯ ಹಠಾತ್ ನಿಧನದಿಂದ ಕವಿ ರಾಮಲಿಂಗಮ್ ಕಂಗಾಲಾದರು. ಜೀವನ ದಲ್ಲಿ ನಿರಾಸಕ್ತಿ ವ್ಯಕ್ತಪಡಿಸಿ ವೇದಾಂತದ ಮಾತುಗಳನ್ನಾಡಲು ಪ್ರಾರಂಭಿಸಿದರು. ಕೆಲವೇ ದಿನಗಳಲ್ಲಿ ಈ ಆಘಾತದಿಂದ ಅವರು ಚೇತರಿಸಿಕೊಂಡರು. ಗತಿಸಿದ ತಮ್ಮ ಪತ್ನಿಯ ಕೊನೆಯ ಆಸೆಯನ್ನು ತೀರಿಸಬೇಕೆಂಬ ನಿಶ್ಚಯದಿಂದ ಆಕೆಯ ತಂಗಿ ಸೌಂದರಮ್ ಅಮ್ಮಾಳ್ ಅವರನ್ನು ಎರಡನೆಯ ಪತ್ನಿಯನ್ನಾಗಿ ಮದುವೆಯಾದರು.

ಅವರು ಐದು ಮಕ್ಕಳಿಗೆ ಜನ್ಮವಿತ್ತರು. ಮೂವರು ಗಂಡು ಮಕ್ಕಳು ಇಬ್ಬರು ಹೆಣ್ಣು ಮಕ್ಕಳು: ಅಮೃತಲಿಂಗಮ್, ಬಾಲು, ರಾಜಲಕ್ಷ್ಮಿ, ಸರಸ್ವತಿ ಮತ್ತು ರಾಜ.

ಪ್ರೀತಿಪಾತ್ರ ಪತಿಯಾಗಿ ಮಾತ್ರವಲ್ಲದೆ ಕವಿ ಒಬ್ಬ ಆದರ್ಶ ತಂದೆಯೂ ಆಗಿ ಮಕ್ಕಳನ್ನು ಪ್ರೀತ್ಯಾದರದಿಂದ ಕಾಣುತ್ತಿದ್ದರು. ಮಕ್ಕಳಿಗೆ ಖಾಹಿಲೆ ಕಸಾಲೆಯಾದಾಗ ಹಗಲು ರಾತ್ರಿಯೆನ್ನದೆ ಪಕ್ಕದಲ್ಲಿ ಕುಳಿತು ಅವರಿಗೆ ಉಪಚರಿಸುತ್ತಿದ್ದರು. ಆದರೂ ಗಂಡುಮಕ್ಕಳ ಭವಿಷ್ಯದ ಬಗೆಗೆ ಅವರು ಯಾವುದ ಯೋಜನೆ ಹಾಕಿಕೊಳ್ಳಲಿಲ್ಲ. ಅದನ್ನು ಅವರ ಪಾಲಿಗೆ ಬಿಟ್ಟಿದ್ದರು. ಸಂತೃಪ್ತ ಕುಟುಂಬ ಜೀವನ ನಡೆಸಿದ ಅವರು ತಮ್ಮ 84 ನೆಯ ಪಕ್ವ ವಯಸ್ಸಿನಲ್ಲಿ ಹತ್ತು ಮೊಮ್ಮಕ್ಕಳನ್ನು ನೋಡಿದ ನಂತರ ಇಹ ಲೋಕವನ್ನು ತ್ಯಜಿಸಿದರು.

## ಸ್ವಾತಂತ್ರ್ಯ ಹೋರಾಟಗಾರರು

ಸಹಜವಾಗಿ ಬೆಳೆಯುತ್ತಿದ್ದ ದೇಶಭಕ್ತಿ ಅವರನ್ನು 1906 ರಲ್ಲಿ ಸಕ್ರಿಯವಾಗಿ ರಾಜಕೀಯ ಪ್ರವೇಶ ಮಾಡಿಸಿತು. ಬಂಗಾಳದ ವಿಭಜನೆಯಿಂದಾಗಿ ದೇಶದಾದ್ಯಂತ ಅಶಾಂತಿಯುಂಟಾಗಿತ್ತು. 'ಕರ್ಮಯೋಗಿ' ಮತ್ತು 'ವಂದೇ ಮಾತರಮ್' ಎಂಬ ಪತ್ರಿಕೆಗಳಲ್ಲಿ ಅರವಿಂದರ ಲೇಖನಗಳು ಪ್ರಕಟವಾಗಿ ನಮ್ಮ ಕವಿವರ್ಯರು ಸೇರಿದಂತೆ ಅನೇಕ ದೇಶಪ್ರೇಮಿಗಳ ಹೃದಯವನ್ನು ಕಲಕಿ ಬೆಂಕಿಯಾಡಿಸಿತು. ಸುರೇಂದ್ರನಾಥ ಬ್ಯಾನರ್ಜಿ, ಸಿ ಆರ್. ದಾಸ್, ಲಾಲಾ ಲಜಪತರಾಯ್, ದಾದಾಭಾಯಿ ನವರೋಜಿ, ಗೋಪಾಲಕೃಷ್ಣ ಗೋಖಲೆ, ಬಿಪಿನ್‌ಚಂದ್ರ ಪಾಲ್, ಬಾಲಗಂಗಾಧರ ತಿಲಕ್ ಮುಂತಾದ ಧುರೀಣರ ಭಾಷಣಗಳನ್ನು ಲಾಲಸೆಯಿಂದ ಕೇಳಿದ ರಾಮಲಿಂಗಮ್ ಅವರ ಹೃದಯ ದೇಶದ ಸ್ವಾತಂತ್ರ್ಯಕ್ಕಾಗಿ ಇನ್ನಷ್ಟು ತುಡಿಯಿತು. ಅದಕ್ಕೆ ಅವರ ಸ್ನೇಹಿತ ನಾಮಕ್ಕಲ್ ನಾಗರಾಜ ಐಯಂಗಾರ್ ಅವರು ಇನ್ನಷ್ಟು ಪುಷ್ಟಿ ನೀಡಿದರು. ಅವರಿಬ್ಬರು ತಮ್ಮ ಜೀವನವನ್ನು ದೇಶಸೇವೆಗಾಗಿ ಮುಡಿಪಿಟ್ಟು ಬ್ರಿಟಿಷರ ವಿರುದ್ಧ ಹೋರಾಡಲು ತೀರ್ಮಾನಿಸಿದರು. ಅವರು ತಮಿಳುನಾಡಿನಾದ್ಯಂತ ಸಂಚರಿಸಿ ಹೋದೆಡೆಯಲ್ಲೆಲ್ಲಾ ದೇಶಪ್ರೇಮವನ್ನು ಕುರಿತು ಭಾಷಣ ಮಾಡುತ್ತಾ ಜನ ಮೆಚ್ಚುಗೆ ಪಡೆದರು. ರಾಮಲಿಂಗಮ್ ಅವರು 1914 ರಲ್ಲಿ ತಿರುಚಿ ಜಿಲ್ಲೆಯ ಕಾಂಗ್ರೆಸ್ ಸಮಾವೇಶದ ಕಾರ್ಯದರ್ಶಿಯಾದರು. ಅವರು ಪಡೆದಿದ್ದ ಜನಪ್ರಿಯತೆಯಿಂದ ಅವರ ಮಾವನವರ ಊರಾದ ಕರೂರಿನ ಕಾಂಗ್ರೆಸ್ ವಲಯಕ್ಕೆ ಅಧ್ಯಕ್ಷರೂ ಆದರು. 1921 ರಿಂದ 1930 ರವರೆಗೆ ನಾಮಕ್ಕಲ್ ಕಾಂಗ್ರೆಸ್ ವಲಯಕ್ಕೆ ಅವರು ಅಧ್ಯಕ್ಷ ರಾದರು. ಪಾಂಡಿಚೇರಿಗೆ ಹೋಗಿ ವಿ.ವಿ.ಎಸ್. ಅಯ್ಯರ್, ಸುಬ್ರಹ್ಮಣ್ಯ ಶಿವ ಮುಂತಾದ ತೀವ್ರವಾದಿಗಳಿಂದ ಸ್ಫೂರ್ತಿ ಪಡೆದರು. ಮಹಾಕವಿ ಸುಬ್ರಹ್ಮಣ್ಯ ಭಾರತಿ ಮತ್ತು ಅರವಿಂದರನ್ನು ಭೇಟಿಮಾಡಲು ಸಾಧ್ಯವಾಗದೆ ಅವರು ನಿರಾಶ ರಾದರು. ತಮಿಳುನಾಡು ಕಾಂಗ್ರೆಸ್ ಸಂಘಟನೆಗೆ ಅವರು ನಿಜವಾದ ಆಧಾರಸ್ತಂಭ

ವಾದರು, ಬ್ರಿಟಿಷ್ ಆಡಳಿತವನ್ನು ಖಂಡಿಸಿದರು, ಆಡಳಿತವನ್ನು ಟೀಕೆ ಮಾಡುವ ರೀತಿ, ಅನುರಣನ ಕಂಠ, ಮಂಧ್ಯೆ ಮಧ್ಯೆ ಅವರೇ ರಚಿಸಿದ ಹಾಡುಗಳಿಂದ ದಂಗುಬಡಿಸುವ ವಾಗ್ಮಿತೆ ಇವೆಲ್ಲವೂ ಸೇರಿ ಇವರ ಭಾಷಣವೆಂದರೆ ಎಲ್ಲೆಲ್ಲೂ ಕಿಕ್ಕಿರಿದು ಜನ ಸೇರುತ್ತಿದ್ದರು. ಇಳಂಪಳ್ಳಿ ಜಮೀನ್ದಾರರಾಗಿದ್ದ ಶ್ರೀ ರಾಜಲಿಂಗಮ್ ಚೆಟ್ಟಿಯಾರ್ ಅವರ ಸಹಾಯದಿಂದ ಜಿಲ್ಲಾ ಮಟ್ಟದಲ್ಲಿ ಒಂದು ರಾಜಕೀಯ ಸಮ್ಮೇಳನ ನಡೆಸಿದರು. ಶ್ರೀಮತಿ ಅನಿಬೆಸೆಂಟ್ ಅವರು ಇದರಲ್ಲಿ ಭಾಗವಹಿಸಿ ಭಾಷಣ ಮಾಡಿದರು. ಈ ಸಂದರ್ಭದಲ್ಲಿ ನಡೆದ ಒಂದು ಚಿತ್ರ ಪ್ರದರ್ಶನದಲ್ಲಿ ರಾಮಲಿಂಗಮ್ ಅವರ ಕೆಲವು ವರ್ಣಚಿತ್ರಗಳನ್ನು ಪ್ರದರ್ಶಿಸಲಾಗಿತ್ತು. ಥಿಯೋಸಫಿಕಲ್ ಸೊಸೈಟಿಯ ಮುಖ್ಯಸ್ಥರಾದ ಜಾರ್ಜ್ ಅರುಂಡೇಲ್ ಅವರು ಚಿತ್ರಗಳ ಬಗೆಗೆ ಮೆಚ್ಚುಗೆ ಸೂಚಿಸಿದರಲ್ಲದೆ ಚಿನ್ನದ ಪದಕವೊಂದನ್ನು ಬಹುಮಾನವಾಗಿ ಕೊಟ್ಟು ಗೌರವಿಸಿದರು. ಶ್ರೀಮತಿ ಅನಿಬೆಸೆಂಟ್ ಅವರು ಸವಿನೆನಪಿಗಾಗಿ ಕೆಲವು ವರ್ಣಚಿತ್ರಗಳನ್ನು ತೆಗೆದುಕೊಂಡರು.

## ಗಾಂಧಿ ಭಕ್ತ

ಕವಿವರ್ಯರು ಹೀಗೆ ಸಕ್ರಿಯ ರಾಜಕೀಯ ಪ್ರವೇಶ ಮಾಡಿದ ಆ ಸಮಯಕ್ಕೆ ದಕ್ಷಿಣ ಆಫ್ರಿಕದಲ್ಲಿ ವರ್ಣದ್ವೇಷದ ವಿರುದ್ಧ ಸತ್ಯಾಗ್ರಹಮಾಡಿ ಜಯಗಳಿಸಿ ಪ್ರಖ್ಯಾತರಾಗಿದ್ದ ಗಾಂಧೀಜಿಯವರು ಸ್ವದೇಶಕ್ಕೆ ಹಿಂದಿರುಗಿದರು. ಪಂಡಿತ ಮದನಮೋಹನ ಮಾಳವೀಯ ಗಾಂಧಿಯವರನ್ನು ಬನಾರಸ್‌ನಲ್ಲಿ ತೆರೆಯಲಿದ್ದ ಹಿಂದೂ ವಿಶ್ವವಿದ್ಯಾಲಯದ ಉದ್ಘಾಟನೆಗೆ ಆಹ್ವಾನಿಸಿದರು. ಇದರ ಸ್ಥಾಪನೆಗೆ ಕೊಡುಗೆ ನೀಡಿದ್ದ ಅನೇಕ ರಾಜರು, ಜಮೀನ್ದಾರರು ಈ ಸಮಾರಂಭದಲ್ಲಿ ಭಾಗವಹಿಸಿದ್ದರು. ಗಾಂಧೀಜಿ ತಮ್ಮ ಭಾಷಣದಲ್ಲಿ ರಾಜರ, ಶ್ರೀಮಂತರ ದುಂದುವೆಚ್ಚ, ವಿಲಾಸ ಜೀವನ ಮುಂತಾದುವನ್ನು ದೂಷಿಸುತ್ತಾ ಕೋಟ್ಯಂತರ ಬಡವರ ಬಗೆಗೆ ಹೃದಯಹೀನರಾದ ಅವರನ್ನು ಬಹಿರಂಗವಾಗಿಯೆ ಖಂಡಿಸಿದರು. ಗಾಂಧೀಜಿಯವರ ಈ ಮುಚ್ಚುಮರೆಯಿಲ್ಲದ ಭಾಷಣ ನಮ್ಮ ಕವಿವರ್ಯರನ್ನು ವಿಶೇಷವಾಗಿ ಆಕರ್ಷಿಸಿತು. ನುಡಿ, ನಡೆ ಏಕವಾಗಿರುವುದನ್ನು ಅರಿತ ಅವರು ನಿಜವಾದ ನಾಯಕನ ಲಕ್ಷಣ ಗಾಂಧಿಯವರಲ್ಲಿದೆ ಎಂದು ಮನಗಂಡರು. ಅಂದಿನಿಂದ ಅವರು ಗಾಂಧೀಜಿಯವರ ಅಚ್ಚುಮೆಚ್ಚಿನ ಅನುಯಾಯಿಯಾದರು. ಪ್ರಾರಂಭದಲ್ಲಿ ಅವರ ಅಹಿಂಸಾ ತತ್ವಗಳನ್ನು ವಿರೋಧಿಸಿದ್ದರೂ ಈಗ ಸಂಪೂರ್ಣವಾಗಿ ಅವರ ತತ್ವಬೋಧೆಯಲ್ಲಿ ಉನ್ಮತ್ತರಾಗಿ ಆರಾಧಿಸಲು ತೊಡಗಿ ಪರಮಭಕ್ತರಾದರು, ತಿರುವಳ್ಳುವರ್ ಅವರು ತಮ್ಮ ತಿರುಕ್ಕುರಳ್ ಗ್ರಂಥದಲ್ಲಿ ಸ್ಪಷ್ಟಪಡಿಸಿರುವ ಪರಮ ಪವಿತ್ರವಾದುದು ಅಹಿಂಸೆ ಅದರ ನಂತರ ಸತ್ಯ ಎಂಬ ಆದರ್ಶಗಳು ಗಾಂಧೀಜಿಯವರಲ್ಲಿ ಒಂದುಗೂಡಿರುವುದನ್ನು ಕವಿ ಕಂಡರು.

ಇನ್ನಾ ಶೆಯ್ದಾರ್ಕ್ಕುಮ್ ಇನಿಯವೇ ಶೆಯ್ಯಾಕ್ಕಾಲ್
ಎನ್ನ ಪಯಂತ್ತದೋ ಶಾಲ್ಬು
(ಅಹಿತವನ್ನು ಮಾಡಿದವರಿಗೆ ಹಿತವನ್ನು ಬಯಸದೆ
ಹೋದರೆ ಅಂಥ ಸದ್ಭಾವನೆಯಿಂದ ಪ್ರಯೋಜನವೇನು ?)
ಇನ್ನಾ ಶೆಯ್ದಾರ್ರೈ ಯೊವಿಂತ್ತಲವರ್ ನಾಣ
ನನ್ನಯಂ ಇಣಾಯಂದ್ದುವಿಡಲ್
(ಕೇಡು ಮಾಡಿದವರನು ಪೀಡಿಸುವುದೆಂತೆನಲು
ಅವರು ನಾಚುವ ಹಾಗೆ
ಉಪಕಾರ ಮಾಡಿ ಮರೆತೇ ಬಿಡುವುದು)

ಇಂತಹ ವಳ್ಳುವರ್ ಅವರ ದ್ವಿಪದಿಗಳು ಗಾಂಧೀಜಿಯವರ ತತ್ವಗಳ ಹಿನ್ನೆಲೆಯಲ್ಲಿ ಹೇಗೆ ಪ್ರತಿಪಾದಿಸುತ್ತವೆ ಎಂಬುದನ್ನು ಅವರು ಸಾಧಾರವಾಗಿ ತೋರಿಸಿಕೊಟ್ಟರು. ಈ ಕಾರಣದಿಂದಲೆ ಅವರು ಗಾಂಧೀಜಿಯವರನ್ನು ಮನಸಾರೆ ಕೊಂಡಾಡಲು ಪ್ರಾರಂಭಿಸಿದರು. ಇದನ್ನರಿತ ಜನ ಅವರನ್ನು 'ಗಾಂಧಿ ಕವಿ' ಎಂದು ಗುರುತಿಸಿದರು. ಅವರ ಕಾದಂಬರಿಗಳು, ಸಾಹಿತ್ಯಕ ಲೇಖನಗಳು ಗಾಂಧೀವಾದವನ್ನು ಮೂಲಭೂತವಾಗಿ ಪ್ರತಿಪಾದಿಸುವ ಕಥಾವಸ್ತುವನ್ನು ಹೊಂದಿವೆ. ವಾಸ್ತವವಾಗಿ ಅವರ ಸಾಹಿತ್ಯಕ ಕೃತಿಗಳು ಹಾಗೂ ರಾಜಕೀಯ ಚಟುವಟಿಕೆಗಳು ಗಾಂಧೀವಾದದಿಂದ ಚೇತನಗೊಂಡಿವೆ. ಅವರನ್ನು ಬೆಳಕಿಗೆ ತಂದದ್ದು ಗಾಂಧೀತತ್ವದ ಸ್ಫೂರ್ತಿಯೆ. 1920 ರಲ್ಲಿ ಬ್ರಿಟಿಷರ ದಬ್ಬಾಳಿಕೆ ವಿರುದ್ಧ ಅಸಹಕಾರ ಮತ್ತು ಅಹಿಂಸಾಮಾರ್ಗದ ಅಸ್ತ್ರವನ್ನು ಉಪಯೋಗಿಸಲು ತಮ್ಮ ತೀರ್ಮಾನವನ್ನು ಮುಂದೊಡ್ಡಿದರು. ಖಿಲಾಫತ್ ಚಳುವಳಿಗೆ ಬೆಂಬಲ ನೀಡಬೇಕೆಂದು ಎಲ್ಲ ಹಿಂದೂಗಳನ್ನು ಕೇಳಿಕೊಂಡರು. ಅಸಹಕಾರ ಚಳುವಳಿ ಬಗೆಗೆ ತಮ್ಮ ಮಸೂದೆಯನ್ನು ಚರ್ಚಿಸಲು ಕಲ್ಕತ್ತೆಯಲ್ಲಿ ಒಂದು ಕಾಂಗ್ರೆಸಿನ ವಿಶೇಷ ಅಧಿವೇಶನ ಕರೆಯಲಾಯಿತು. ಖಿಲಾಫತ್ ಸಮ್ಮೇಳನವನ್ನು ಅದೇ ಮಂಟಪದಲ್ಲಿ ನಡೆಸಲಾಯಿತು. ತಿಲಕ್ ಅವರ ಅನುಯಾಯಿಗಳು ಗಾಂಧೀಜಿಯವರ ಅಹಿಂಸೆ ಹಾಗೂ ಅಸಹಕಾರ ಚಳುವಳಿ ಮಾರ್ಗಗಳು ಪ್ರಾಯೋಗಿಕವಾದುದಲ್ಲವೆಂಬ ಕಾರಣ ಮುಂದೊಡ್ಡಿದ ಕಾರಣ ಅಲ್ಲಿ ಒಮ್ಮತ ಸಾಧಿಸಲಾಗಲಿಲ್ಲ. ಮತಧರ್ಮಗಳನ್ನು ರಾಜಕೀಯದೊಡನೆ ಸೇರಿಸುತ್ತಿರುವುದಾಗಿ ಗಾಂಧೀಜಿಯವರನ್ನು ಅವರು ದೂಷಿಸಲು ಮೊದಲು ಮಾಡಿದರು. ಬಹುಮಟ್ಟಿಗೆ ಮುಖ್ಯ ಮುಂದಾಳುಗಳೆಲ್ಲಾ ಗಾಂಧೀಜಿಯವರ ಅಭಿಪ್ರಾಯಗಳನ್ನು ವಿರೋಧಿಸಿದರು.

ಚಂಪಾರಣ್ಯದಲ್ಲಿ ಶ್ರೀಮಂತ ಭೂಮಾಲೀಕರ ವಿರುದ್ಧ ಬಂಡೆದ್ದ ಭೂಕಾರ್ಮಿಕರ ಹಿತರಕ್ಷಣೆ ಮಾಡುವಲ್ಲಿ ಗಾಂಧೀಜಿಯವರು ಯಶಸ್ವಿಯಾದರು. ರೌಲತ್ ಕಾಯಿದೆಗೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿ ಜಲಿಯನ್ ವಾಲಾಬಾಗ್ ಹಿಂಸಾಕಾಂಡದಲ್ಲಿ ಜನರಲ್ ಡೈಯರನ ನಡವಳಿಕೆಯನ್ನು ಖಂಡಿಸಿದ ಪರಿಣಾಮವಾಗಿ ಗಾಂಧೀಜಿಯವರು

ಜನಸಾಮಾನ್ಯರಿಂದ ಅಪಾರ ಮೆಚ್ಚುಗೆ ಗಳಿಸಿದರು. ಖಿಲಾಫತ್ ಚಳುವಳಿಗೆ ಮನಃ ಪೂರ್ವಕವಾಗಿ ಬೆಂಬಲ ನೀಡಿದ ಕಾರಣ ಮುಸ್ಲಿಮ್ ಜನಾಂಗದವರೂ ಅವರಿಗೆ ಬೆಂಬಲ ನೀಡಿದರು. ಗಾಂಧೀಜಿಯವರ ಮಸೂದೆಗೆ ಕಲ್ಕತ್ತೆಯ ಅಧಿವೇಶನದಲ್ಲಿ ಇಂಬು ಗೊಡಿಸಬಾರದೆಂಬ ಉದ್ದೇಶದಿಂದ ಕಾಂಗ್ರೆಸ್ಸಿನ ಕೆಲವು ತೀವ್ರವಾದಿಗಳು ತಮ್ಮ ಅನುಯಾಯಿಗಳನ್ನು ಅಧಿಕ ಸಂಖ್ಯೆಯಲ್ಲಿ ಅಲ್ಲಿಗೆ ಕರೆತಂದಿದ್ದರು. ತಮಿಳುನಾಡಿನಿಂದ ಶ್ರೀ ವಿ.ಓ. ಚಿದಂಬರಮ್ ಮತ್ತು ಅವರ ಅನುಯಾಯಿಗಳು ತೀವ್ರವಾದಿಗಳಿಗೆ ಬೆಂಬಲ ನೀಡಲು ಕಲ್ಕತ್ತೆಗೆ ಹೊರಟರು. ಈ ಅಧಿವೇಶನದಲ್ಲಿ ಭಾಗವಹಿಸಲು ನಾಮಕ್ಕಲ್‌ನಿಂದ ಹನೀಫಾ ಎಂಬ ಒಬ್ಬ ಮುಸ್ಲಿಮ್ ದಾನಿ ರಾಮಲಿಂಗಮ್, ನಾಗರಾಜ ಐಯಂಗಾರ್ ಜೊತೆಗೆ ಇಬ್ಬರು ಮುಸ್ಲಿಮ್ ಮುಖಂಡರನ್ನು ಕಳುಹಿಸಿದರು. ಚಿದಂಬರಮ್ ಪಿಳ್ಳೆ ಅವರು ರಾಮಲಿಂಗಮ್ ಪಿಳ್ಳೆಯವರ ಮನಪೊಲಿಸಿಕೊಳ್ಳಲು ಪ್ರಯತ್ನಿಸಿ ವಿಫಲರಾದರು. ಕಲ್ಕತ್ತೆಯ ಅಧಿವೇಶನದಲ್ಲಿ ಕವಿ ರಾಮಲಿಂಗಮ್ ಅವರು ಗಾಂಧೀಜಿಯವರು ತಂದಿದ್ದ ಮಸೂದೆಯ ಪರವಾಗಿ ಮತ ನೀಡಿದರು. ಅದು ಬಹು ಮತದಿಂದ ಒಪ್ಪಿಗೆಯನ್ನೂ ಪಡೆಯಿತು. ಕಲ್ಕತ್ತೆಯ ಅಧಿವೇಶನದ ನಂತರ ತಾವು ಗಾಂಧೀಜಿಯವರ ಗುಲಾಮ ಅಥವಾ ಅಂಧಭಕ್ತನಾದೆನೆಂದು ಕವಿ ರಾಮಲಿಂಗಮ್ ಹೇಳುತ್ತಾರೆ. ಅವರ ಅಂದಿನ ಮನಸ್ಸಿನಲ್ಲಿ ಕಾಂಗ್ರೆಸ್‌ಗಿಂತ ಹೆಚ್ಚು ಗಾಂಧೀಜಿಯವರೇ ನಿಂತರು; ಅವರ ಸೇವೆಯೇ ಹೆಚ್ಚೆನಿಸಿತು. ಭಾರತದಲ್ಲಿ ಅಹಿಂಸೆ ಮತ್ತು ಬೌದ್ಧಿಕ ಕೆಚ್ಚೆದೆಯನ್ನು ಎಚ್ಚರಗೊಳಿಸಿ ಪುನರ್ ಪ್ರತಿಷ್ಠಾಪನೆ ಮಾಡಿದ ಸಲುವಾಗಿ ಗಾಂಧೀಜಿಯವರನ್ನು ರಾಮಲಿಂಗಮ್ ಅವರು ಪೂಜಿಸಿದರು. ಕರ್ಮ, ಭಕ್ತಿ, ರಜ ಮತ್ತು ಜ್ಞಾನಯೋಗ ಇವೆಲ್ಲವನ್ನು ಒಟ್ಟಾಗಿ ಯಥಾರ್ಥದಲ್ಲಿ ಆಚರಿಸುತ್ತಿರುವ ಏಕೈಕ ವ್ಯಕ್ತಿ ಜಗತ್ತಿನಲ್ಲಿಯೆ ಗಾಂಧೀಜಿ ಮಾತ್ರ ಎಂದು ಅವರು ಮನಗಂಡರು.

1921 ರಿಂದ 1930 ರವರೆಗೆ ರಾಮಲಿಂಗಮ್ ಅವರು ನಾಮಕ್ಕಲ್ ಮತ್ತು ಕರೂರಿನಲ್ಲಿ ಕಾಂಗ್ರೆಸ್‌ಗಾಗಿ ಸೇವೆ ಸಲ್ಲಿಸಿದರು. ನಾಮಕ್ಕಲ್‌ಗಿಂತಲೂ ಕರೂರಿನಲ್ಲಿ ಅವರು ಹೆಚ್ಚು ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ಕರೂರಿನ ಅಮರಾವತಿ ನದಿಯ ದಂಡೆಯ ಮೇಲೆ ಅವರು ಮಾಡಿದ ಭಾಷಣಗಳು ಬಹು ಪ್ರಖ್ಯಾತವಾಗಿ ತಮಿಳು ನಾಡಿನ ಮೂಲೆ ಮೂಲೆಯ ಮುಖಂಡರಿಗೆ ಕರೂರು ಆಕರ್ಷಣೆಯಾಯಿತು. ಅವರ ಭಾಷಣಗಳು ಅನೇಕ ಯುವಕರನ್ನು ಹುರಿದುಂಬಿಸಿ ಆಕರ್ಷಿಸಿತು. ಕಲ್ಕಿ ಕೃಷ್ಣಮೂರ್ತಿ, ಅಖಿಲನ್, ಶುದ್ಧಾನಂದ ಭಾರತಿ ಅವರಲ್ಲಿ ಮುಖ್ಯರಾದವರು. ಅಹಿಂಸಾ ತತ್ವವನ್ನು ಬಹಳ ಕಟ್ಟುನಿಟ್ಟಾಗಿ ರಾಮಲಿಂಗಮ್ ಅವರು ಪಾಲಿಸುತ್ತಿದ್ದುದರಿಂದ ಎಷ್ಟೋ ಸಲ 144 ನೇ ಸೆಕ್ಷನ್ ಜಾರಿಯಲ್ಲಿದ್ದರೂ ಅವರನ್ನು ದಸ್ತಗಿರಿ ಮಾಡಲು ಆಗಲಿಲ್ಲ. ಕಾಂಗ್ರೆಸ್ ಕಾರ್ಯಕರ್ತರು ಪೋಲಿಸಿನವರತ್ತ ಕೈಮಾಡಲು ಇಲ್ಲವೆ ಛೇಡಿಸಲು ಅವಕಾಶ ಕೊಡುತ್ತಿರಲಿಲ್ಲ; ಅವರೇನಿದ್ದರೂ ವಿದೇಶಿಯರ ಕೈಗೊಂಬೆ

ಗಳಿಂದ ಬಾಣ ಎಸೆದವರನ್ನು ಬಿಟ್ಟು ಬಾಣವನ್ನು ನೋಯಿಸಿದರೆ ಏನು ಪ್ರಯೋಜನ? ಎಂದು ಕೇಳುತ್ತಿದ್ದರು. ಕರೂರಿನಲ್ಲಿ ನಡೆದ ಒಂದು ಸಭೆಯಲ್ಲಿ ನೆಲದ ಮೇಲೆ ಕುಳಿತು ಕಾರ್ಯಕ್ರಮವನ್ನು ನೋಡುತ್ತಿದ್ದರೆ, ಕಾವಲಿಗಾಗಿ ಬಂದ ಒಬ್ಬ ಪೋಲಿಸಿನವನು ಮಾತ್ರ ಕುರ್ಚಿಯೊಂದರ ಮೇಲೆ ಕುಳಿತು ಕಾರ್ಯಕ್ರಮವನ್ನು ನೋಡುತ್ತಿದ್ದನು. ಇದನ್ನು ನೋಡುತ್ತಿದ್ದ ಸಭಿಕರು ಸುಮ್ಮನಿರಲಿಲ್ಲ. ಅವನ ಮೇಲೆ ಕೈಮಾಡಲು ಪ್ರಯತ್ನಿಸಿದರು. ಕೂಡಲೆ ಕವಿವರ್ಯರು 'ಗಾಂಧೀಜಿ ಕಿ ಜೈ' ಎಂದು ಜೋರಾಗಿ ಘೋಷಣೆ ಮಾಡಿ ಗುಂಪನ್ನು ಚದುರಿಸಿ ಒದಗಲಿದ್ದ ಅಹಿಂಸೆಯನ್ನು ತಪ್ಪಿಸಿದರು. ಆದುದರಿಂದ ಪೋಲಿಸಿನವರು ಸಹ ಎಂದೂ ಕವಿಯೊಡನೆ ಅಸಭ್ಯವಾಗಿ ವರ್ತಿಸಲಿಲ್ಲ.

ಕರೂರಿನಲ್ಲಿ ಒಂದು ಸಲ ಮದರಾಸಿನ ಗವರ್ನರ್ ವೆಲಿಂಗ್‌ಡನ್ ದಂಪತಿಗಳಿಗೆ ಸನ್ಮಾನ ಮಾಡಲಾಯಿತು. ಅವರಿಗೆ ಯಾವುದೇ ರೀತಿ ಅವಮಾನವಾಗದಂತೆ ಬಿಗಿ ಕಾವಲು ಏರ್ಪಾಡು ಮಾಡಲಾಗಿತ್ತು. ಆದರೂ ಪುರಸಭಾಧ್ಯಕ್ಷ ಪೆತ್ತಾಚ್ಚಿ ಚೆಟ್ಟಿಯಾರ್ ಅವರ ಬೇಡಿಕೆಯಂತೆ ಕಾಂಗ್ರೆಸ್ ಕಾರ್ಯಕರ್ತರ ಒಂದು ಮೆರವಣಿಗೆಗೆ ಪೋಲಿಸಿನವರು ಅನುಮತಿ ನೀಡಿದರು. ಇದಕ್ಕೆ ಕಾರಣ ಅದರ ಮುಂದಾಳು ಕವಿ ರಾಮಲಿಂಗಮ್ ಅವರು.

ಕರೂರಿನ ಚಲನಚಿತ್ರ ಮಂದಿರದ ಮಾಲೀಕರೊಬ್ಬರು ಕಾಂಗ್ರೆಸ್ಸಿಗಾಗಿ ಒಂದು ಸಹಾಯ ಪ್ರದರ್ಶನ ನೀಡಲು ನಿರಾಕರಿಸಿದರೆಂಬ ಕಾರಣಕ್ಕಾಗಿ ಅವರ ಮೇಲೆ ಕಲ್ಲು ತೂರಾಟ ಮತ್ತು ಹಿಂಸಾಪ್ರಕರಣದ ಪರಿಸ್ಥಿತಿಯುಂಟಾಗಿತ್ತು. ಗಾಂಧೀಜಿಯವರು ಕರೂರಿಗೆ ಎರಡುಸಲ ಭೇಟಿ ನೀಡಿದರು. ಮೊದಲನೆಯ ಸಲ ಅವರು ಕಾಂಗ್ರೆಸ್ ಕಾರ್ಯಕರ್ತರನ್ನು ಉದ್ದೇಶಿಸಿ ಮಾತನಾಡಿ ಅವರ ಹಿಂಸಾಚಾರವನ್ನು ಖಂಡಿಸಿದರು. ಎರಡನೆಯಸಲ ಅವರ ಪ್ರವಾಸದಲ್ಲಿ ಕರೂರನ್ನು ಸೇರಿಸಲಾಗಿತ್ತು. ನಾಮಕ್ಕಲ್ ಕವಿ ಅದಕ್ಕಾಗಿ ಒಳ್ಳೆಯ ಏರ್ಪಾಡನ್ನು ಮಾಡಿದರು. ಮೂರು ಸಾವಿರ ರೂಪಾಯಿಗಳ ನಿಧಿಯನ್ನು ಗಾಂಧೀಜಿಯವರಿಗೆ ಅರ್ಪಿಸಲು ಅದನ್ನು ಶೇಖರಿಸಿದರು. ಗಾಂಧೀಜಿಯವರ ಪ್ರವಾಸದ ಮೇಲ್ವಿಚಾರಕರಾಗಿದ್ದ ರಾಜಾಜಿಯವರು, ಹಠಾತ್ತನೆ ಗಾಂಧೀಜಿಯವರ ಕಾರ್ಯಕ್ರಮದಲ್ಲಿ ಕರೂರನ್ನು ಕೈಬಿಟ್ಟರು. ಇದಕ್ಕೆ ಗಾಂಧೀಜಿಯವರ ದೇಹಸ್ಥಿತಿ ಚೆನ್ನಾಗಿಲ್ಲವೆಂದು ಕಾರಣವಿತ್ತರು. ಆದರೆ ಕವಿ ರಾಮಲಿಂಗಮ್ ಮತ್ತು ಕೆಲವು ಕಾರ್ಯಕರ್ತರು ಮದರಾಸಿಗೆ ಹೋಗಿ ಅಲ್ಲಿ ಬೀಡುಬಿಟ್ಟಿದ್ದ ಗಾಂಧೀಜಿಯವರನ್ನು ಕಂಡು ತಮಗೆ ಕೊನೆ ಗಳಿಗೆಯಲ್ಲಿ ಆಗಿರುವ ಅನ್ಯಾಯವನ್ನು ಮತ್ತು ನಷ್ಟವನ್ನು ಅವರ ಗಮನಕ್ಕೆ ತಂದರು. ಅವರು ಕೂಡಲೇ ರಾಜಾಜಿಯವರನ್ನು ಕರೆದು, 'ಗೋಬಿ ಮತ್ತು ಕರೂರು ಪ್ರವಾಸದಲ್ಲಿ ಸೇರಿದೆಯೆ ?' ಎಂದು ಕೇಳಿದರು. ಅದಕ್ಕೆ ರಾಜಾಜಿಯವರು ಹೌದೆಂದು ಉತ್ತರ ನೀಡಿ, ಆದರೆ ಕ್ಷೀಣಿಸುತ್ತಿರುವ ಆರೋಗ್ಯದ ಕಾರಣಕ್ಕಾಗಿ ಅದನ್ನು ಕೈಬಿಡಲಾಗಿದೆ ಎಂದರು. ಆದರೆ ಗಾಂಧೀಜಿಯವರು ಅದಕ್ಕೆ ಒಪ್ಪದೆ, 'ಮಾತು ಕೊಟ್ಟಮೇಲೆ ಅದು ಮಾತು, ಅದನ್ನು ಎಂದಿಗೂ

ಯಾವ ಕಾರಣಕ್ಕಾಗಿಯೂ ಮೀರುವಂತಿಲ್ಲ' ಎಂದು ಹೇಳಿ ಮೊದಲಿನಂತೆಯೇ ಗೋಬಿ ಮತ್ತು ಕರೂರನ್ನು ತಮ್ಮ ಕಾರ್ಯಕ್ರಮದಲ್ಲಿ ಸೇರಿಸಿಕೊಳ್ಳುವಂತೆ ರಾಜಾಜಿಯವರಿಗೆ ಹೇಳಿದರು. ಈ ಘಟನೆಯ ನಂತರ ನಮ್ಮ ಕವಿವರ್ಯರಿಗೆ ಗಾಂಧೀಜಿಯವರ ಬಗ್ಗೆ ಇದ್ದ ಗೌರವ ಮತ್ತಷ್ಟು ಹೆಚ್ಚಾಯಿತು.

## ಬಡತನ ಮತ್ತು ಕಾವ್ಯ

ಕಲಾವಿದ ಹಾಗೂ ಕವಿಯಾಗಿ ಅವರು ಗಳಿಸಿದ್ದು ತೀರಾ ಕಡಿಮೆ. ಕಾಂಗ್ರೆಸ್ ಕಾರ್ಯಕರ್ತರ ಊಟೋಪಚಾರಕ್ಕಾಗಿ ಅದೂ ಖರ್ಚಾಗುತ್ತಿತ್ತು. ತಮಿಳಿನಲ್ಲಿ ಪ್ರಚಾರದಲ್ಲಿರುವ 'ಕಾವ್ಯವೂ, ಐಶ್ವರ್ಯವೂ ಒಂದೆಡೆ ಕಲೆಯುವುದಿಲ್ಲ' ಎಂಬ ನಾಣ್ಣುಡಿಗೆ ನಿದರ್ಶನವೆಂಬಂತೆ ನಮ್ಮ ಕವಿವರ್ಯರಿದ್ದರು. ಅನೇಕ ಶ್ರೀಮಂತ ಸ್ನೇಹಿತರು ಅವರಿಗೆ ಭೂಮಿಕಾಣಿ ಕೊಟ್ಟು ಸಹಾಯ ಮಾಡಲು ಮುಂದೆ ಬಂದರು. ಆದರೆ ಏನಾದರೊಂದು ಅಡ್ಡಿ ಆತಂಕ ಬಂದು ಅದು ಅವರಿಗೆ ದಕ್ಕದಾಯಿತು. ಅವರ ಸಹಪಾಠಿಯಾಗಿದ್ದ ಕೊಯಂಬತ್ತೂರಿನ ರಂಗನಾಥ ಚೆಟ್ಟಿಯಾರ್ ಅವರು ವಾರ್ಷಿಕ ಸುಮಾರು ಎರಡೂವರೆ ಸಾವಿರ ರೂಪಾಯಿ ಆದಾಯ ತರುವ ಭೂಮಿಯನ್ನು ಕೊಡಲು ಮುಂದೆ ಬಂದಿದ್ದರು. ಆದರೆ ಅವರ ಆಸೆ ಈಡೇರುವ ಮುನ್ನವೇ ಅವರು ಇಹಲೋಕವನ್ನು ತ್ಯಜಿಸಿದರು. ಮತ್ತೊಬ್ಬ ಸ್ನೇಹಿತ ದೇವಕೋಟ್ಟೆಯ ತಿರುನಾವುಕ್ಕರಸು ಚೆಟ್ಟಿಯಾರ್ ಅವರು ಕವಿವರ್ಯರು ಮಾಡಿದ್ದ ಎಲ್ಲಾ ಸಾಲಗಳನ್ನು ತೀರಿಸಿ ಅವರಿಗೆ ಬರಬೇಕಾಗಿದ್ದ ಭೂಮಿ, ಮನೆ ಎಲ್ಲವನ್ನೂ ಅವರಿಗೆ ದೊರಕಿಸಿ ಕೊಟ್ಟರು. ಒಂದು ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಿ ನಿಗದಿತ ಆದಾಯ ಅವರ ಪುಸ್ತಕ ಪ್ರಕಟಣೆಯಿಂದಲೇ ಬರುವಂತೆ ವ್ಯವಸ್ಥೆ ಮಾಡಬೇಕೆಂದಿದ್ದರು. ಅವರ ಈ ಆಸೆ ಈಡೇರುವ ಮುನ್ನವೆ ಅವರು ಯಾವುದೋ ಅಪಾದನೆಗೆ ಗುರಿಯಾಗಿ ಕಠಿಣ ಶಿಕ್ಷೆಗೆ ಗುರಿಯಾಗಿ ಹತ್ತುವರ್ಷ ಸೆರೆಯಲ್ಲಿರಬೇಕಾಯಿತು. ನಾಮಕ್ಕಲ್‌ನಲ್ಲಿ ಅವರ ಬಾಲ್ಯ ಸ್ನೇಹಿತರಾಗಿದ್ದ ನಾಗರಾಜ ಐಯಂಗಾರ್ ಅವರು ಕವಿವರ್ಯರನ್ನು ಆರ್ಥಿಕ ಬವಣೆಯಿಂದ ಪಾರುಮಾಡಬೇಕೆಂದು ಅದೆಷ್ಟೋ ಪ್ರಯತ್ನ ಮಾಡಿದರು. ರಾಮ ಲಿಂಗಮ್ ಅವರನ್ನು ಅವರು 'ಮೂಕ ಮಿಲ್ಟನ್' ಎಂದು ಕರೆದಿದ್ದಾರೆ. ಜನಾರೋಗ್ಯ ಮಂತ್ರಿಗಳಾಗಿದ್ದ ಡಾ॥ ಪಿ.ಟಿ. ರಾಜನ್ ಅವರಿಗೆ ಪತ್ರ ಬರೆದು ಸರಕಾರದ ಮೂಲಕ ಅವರ ಕವನಗಳನ್ನು ಮುದ್ರಿಸಿ ಗೌರವಧನ ರೂಪದಲ್ಲಿ ರಾಮಲಿಂಗಮ್ ಅವರಿಗೆ ಹಣ ಬರುವಂತೆ ಕೋರಿಕೊಂಡರು. ಸಚಿವರು ಅದಕ್ಕೆ ಒಪ್ಪಿಗೆಯನ್ನು ನೀಡಿದ್ದರು. ಆದರೆ ದುರದೃಷ್ಟವಶಾತ್ ಒಂದು ವಾರದೊಳಗಾಗಿ ಮಂತ್ರಿಮಂಡಳಿಯೇ ರಾಜೀನಾಮೆ ನೀಡಬೇಕಾಯಿತು.

1937 ರಲ್ಲಿ ಕಾಂಗ್ರೆಸ್ ಪಕ್ಷ ಸ್ಥಳೀಯ ಸಂಸ್ಥೆಗಳ ಬಹುತೇಕ ಎಲ್ಲಾ ಸ್ಥಾನ ಗಳನ್ನು ಗಳಿಸಿತ್ತು. ಕವಿ ರಾಮಲಿಂಗಮ್ ಅವರು ಸೇಲಮ್ ಜಿಲ್ಲಾ ಬೋರ್ಡಿನ

ಒಬ್ಬ ಸದಸ್ಯರಾಗಿ ಅವಿರೋಧ ಆಯ್ಕೆಯಾದರು. ಅಪಾರ ಜನಪ್ರಿಯತೆಯ ಪರಿಣಾಮವಾಗಿ ಅವರ ವಿರುದ್ಧ ಸ್ಪರ್ಧಿಸಲು ಯಾರೂ ಮುಂದೆ ಬರಲಿಲ್ಲ. ಆ ಸ್ಥಾನದಲ್ಲಿ ಅವರು 1937 ರಿಂದ 1944 ರವರೆಗೆ ಮುಂದುವರಿದರು. ಈ ಅವಧಿಯಲ್ಲಿ ಸೇಲಮ್ ಜಿಲ್ಲಾ ಬೋರ್ಡ್ ಕವಿವರ್ಯರ ಕೆಲವು ಕವನಗಳನ್ನು ಆಯ್ಕೆ ಮಾಡಿ ಪ್ರಕಟಿಸಿ ಅದನ್ನು ತನ್ನ ಅಧೀನದಲ್ಲಿರುವ ಎಲ್ಲಾ ಶಾಲೆಗಳಿಗೂ ಗೊತ್ತುಪಡಿಸಬೇಕೆಂದು ತೀರ್ಮಾನಿಸಿತು. ನಾಮಕ್ಕಲ್ ಕವಿಯ 'ಪ್ರಾರ್ಥನೈ' ಎಂಬ ಕವನ ಸಂಕಲನವನ್ನು ಮೂರನೆಯ ತರಗತಿಯಿಂದ ಪ್ರೌಢಶಾಲೆಯ ಅಂತಿಮ ತರಗತಿಯವರೆಗೆ ಪಠ್ಯಪುಸ್ತಕವನ್ನಾಗಿ ಗೊತ್ತುಪಡಿಸಬೇಕೆಂದು ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದ ನಾಚ್ಚಿಯಪ್ಪ ಗೌಂಡರ್ ಅವರು ತಕ್ಷಣವೇ ಆದೇಶ ನೀಡಿದರು. ಸುಮಾರು 50 ಸಾವಿರ ಪ್ರತಿಗಳಾದರೂ ಖರ್ಚಾಗಬಹುದೆಂದು ನಿರೀಕ್ಷಿಸಿ ಮುಂಜಾಗರೂಕತೆಯಿಂದ 25 ಸಾವಿರ ಪ್ರತಿಗಳನ್ನು ಮಾತ್ರ ಅಚ್ಚು ಹಾಕಿಸಿದರು. ಅದೇಕೋ ಅವರ ನಿರೀಕ್ಷೆಯಂತೆ ಹೆಚ್ಚು ಪ್ರತಿಗಳು ಖರ್ಚಾಗಲಿಲ್ಲ. ಏಳು ವರ್ಷಗಳ ನಂತರವೂ ಸುಮಾರು 8 ಸಾವಿರ ಪ್ರತಿಗಳು ಮಾರಾಟವಾಗದೆ ಮನೆಯಲ್ಲಿಯೇ ಧೂಳು ಹಿಡಿದಿತ್ತು.

ಸ್ವರ್ಗೀಯ ಶ್ರೀ ಚಿನ್ನ ಅಣ್ಣಾಮಲೈ ಅವರು ಮೊದಲಿನಿಂದಲೂ ಕಾಂಗ್ರೆಸ್ಸಿನ ಮುಖಂಡರಾಗಿದ್ದವರು. ಕವಿವರ್ಯರ ಗ್ರಂಥಗಳನ್ನು ಪ್ರಕಟಿಸಿ ಸಹಾಯ ಮಾಡಲು ಮುಂದೆ ಬಂದರು. ಇಂಗ್ಲೆಂಡಿನಲ್ಲಿ ಜಾನ್‌ಸನ್ ಅವರಿಗೆ ಬಾಸ್ವೆಲ್ ಅವರಂತೆ ಇದ್ದು ಕೆಲವು ವರ್ಷಗಳು ಕವಿ ರಾಮಲಿಂಗಮ್ ಅವರಿಗೆ ಸಹಾಯ ಮಾಡಿದರು. 'ತಮಿಳ್ ಪಣ್ಣೈ' ಎಂಬ ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಿ ಪ್ರಕಟವಾಗದೆ ಉಳಿದಿದ್ದ ಅನೇಕ ಪುಸ್ತಕಗಳನ್ನು ಅವರು ಪ್ರಕಟಿಸಿದರು. ಕವಿವರ್ಯರ ಹಲವು ಮಿತ್ರರು, ಶ್ರೇಯೋಭಿಲಾಷಿಗಳು ಈ ನಿಯಮಿತ ಸಂಸ್ಥೆಯ ಪಾಲುದಾರರಾದರು. ದುರಾದೃಷ್ಟವೋ ಎಂಬಂತೆ ಕೆಲವೇ ದಿನಗಳಲ್ಲಿ ಕಂಪನಿಯು ಕಷ್ಟಕ್ಕೊಳಗಾಗಿ ಮುಚ್ಚಬೇಕಾಯಿತು. ತಮ್ಮ ದುರಾದೃಷ್ಟವನ್ನು ನಮ್ಮ ಕವಿವರ್ಯರು ಹಳಿದುಕೊಂಡರೇ ಹೊರತು ಇದಕ್ಕಾಗಿ ಬೇರೆಯವರನ್ನು ದೂಷಿಸಲಿಲ್ಲ. ಆರ್ಥಿಕವಾಗಿ ಅವರ ಸ್ಥಿತಿ ಒಂದೇ ರೀತಿಯಲ್ಲಿತ್ತು; ಮೊದಲಿನಿಂದಲೂ ಕೈಗೆ ಬಂದದ್ದು ಬಾಯಿಗೆ ಬರಲಿಲ್ಲ.

## ಭಾರತಿಯಾರರೊಡನೆ ಭೇಟಿ

ತಮಿಳುನಾಡಿನ ಮೊಟ್ಟಮೊದಲ ರಾಷ್ಟ್ರಕವಿ ಭಾರತಿಯಾರರ ಜೊತೆ ಭೇಟಿಯಾದ ಸಂದರ್ಭವನ್ನು ಕವಿ ನಾಮಕ್ಕಲ್ ರಾಮಲಿಂಗಮ್ ಅವರು ಆತ್ಮಚರಿತ್ರೆಯಲ್ಲಿ ಅತ್ಯಂತ ಹೆಮ್ಮೆ ಹಾಗೂ ಉತ್ಸಾಹದಿಂದ ಹೇಳುತ್ತಾರೆ. ಕವಿವರ್ಯರ ಗೆಳೆಯ ನಾಗರಾಜ ಐಯಂಗಾರ್ ಅವರು ಕಾನೂನು ಪದವಿಗಾಗಿ ಮದರಾಸಿನಲ್ಲಿ ಓದುತ್ತಿದ್ದಾಗ ಕವಿ ಭಾರತಿಯಾರರ ಮೈನವಿರೇಳಿಸುವ ಭಾಷಣಗಳನ್ನೂ ಹೃದಯ ಕಲಕುವ ಹಾಡುಗಳನ್ನೂ ಸ್ವತಃ ಮೂರ್ ಮಾರ್ಕೆಟ್ ಬಳಿ ಒಂದು ಸಭೆಯಲ್ಲಿ ಕಂಡು ಕೇಳಿದ್ದರು. ಬ್ರಿಟಿಷರ

ದಬ್ಬಾಳಿಕೆಯು ವಿರುದ್ಧ ಅವರ ಭಾಷಣಗಳಲ್ಲಿ ಕಂಡುಬರುತ್ತಿದ್ದುವು. 1910 ರಲ್ಲಿ ಮದರಾಸಿನಲ್ಲಿ ಒಂದು ಭಾವಚಿತ್ರ ಪ್ರದರ್ಶನ ನಡೆಯಿತು. ನಮ್ಮ ಕವಿವರ್ಯರೂ ಅಲ್ಲಿ ಪ್ರದರ್ಶನಕ್ಕಾಗಿ ತಮ್ಮ ಕೆಲವು ಕೃತಿಗಳನ್ನು ಕಳುಹಿಸಿದರು. ಅವರಿಗೆ ಒಂದು ರಜತ ಪದಕವೂ ದೊರೆಯಿತು. ಆ ಪದಕವನ್ನು ತಾವೇ ಕೈಯಾರೆ ಸ್ವೀಕರಿಸಬೇಕೆಂಬ ಹಂಬಲ ದಿಂದ ತಂದೆಯು ಅಪ್ಪಣೆ ಪಡೆದು ಮದರಾಸಿಗೆ ಹೊರಟರು. ಅವರ ಜೊತೆಯಲ್ಲಿ ಗೆಳೆಯ ನಾಗರಾಜ ಐಯಂಗಾರ್ ಅವರೂ ಹೊರಟಿದ್ದರು. ಅಲ್ಲಿಂದ ಇಬ್ಬರೂ ನೇರ ಪಾಂಡಿಚೇರಿಗೆ ಹೋದರು. ಭಾರತಿಯಾರರನ್ನು ಭೇಟಿಮಾಡಿ ಅವರ ಹಾಡುಗಳನ್ನು ಕಿವಿಯಾರೆ ಕೇಳಬೇಕೆಂದು ಆಸೆಹೊತ್ತು ಅವರು ಹೊರಟಿದ್ದರು. ಆದರೆ ನಿರಾಶೆ ಯಾಯಿತು: ಆಗ ಭಾರತಿಯಾರರು ಪಾಂಡಿಚೇರಿಯಲ್ಲಿರಲಿಲ್ಲ, ಬೇರೊಂದು ಊರಿಗೆ ಹೊರಟಿದ್ದ ಅವರು ಮರಳಿ ಬರಲು ಸುಮಾರು ಹತ್ತು ದಿನಗಳಾಗಬಹುದೆಂದು ತಿಳಿಯಿತು. ವಿ.ವಿ.ಎಸ್. ಐಯರ್ ಅವರನ್ನು ಕಂಡು ಮಾತನಾಡಿ ಗೆಳೆಯರಿಬ್ಬರೂ ನಾಮಕ್ಕಲ್‌ಗೆ ಮರಳಿ ಹಿಂತಿರುಗಿದರು.

ಚೆಟ್ಟಿನಾಡಿಗೆ ಭಾವ ಚಿತ್ರಗಳನ್ನು ಬರೆದುಕೊಡಲು ರಾಮಲಿಂಗಮ್ ಅವರು ಆಗಾಗ್ಗೆ ಹೋಗಿ ಬರುತ್ತಿದ್ದರು. ಇಂತಹ ಒಂದು ಸಂದರ್ಭದಲ್ಲಿ ಅವರು ಭಾರತಿಯಾರರನ್ನು ಭೇಟಿಮಾಡಿದರು. ಕಾರೈಕ್ಕುಡಿಯ ಶ್ರೀ ಗೋವಿಂದರಾಜ ಐಯಂಗಾರ್ ಅವರನ್ನು ಇಂತಹ ಸಂದರ್ಭದಲ್ಲಿ ಒಮ್ಮೆ ಭೇಟಿಮಾಡಿದರು. ಇವರಿಗೆ ಬೇಕಾದ ಚೆಟ್ಟಿಯಾರೊಬ್ಬರು ಊರಿನಲ್ಲಿರಲಿಲ್ಲವಾದ ಕಾರಣ ರಾಮಲಿಂಗಮ್ ಇವರಲ್ಲಿ ಕೆಲವು ದಿನಗಳು ತಂಗಿದ್ದರು. ಅಲ್ಲಿ ಶ್ರೀ ವೆಂಕಟಕೃಷ್ಣ ಐಯರ್ ಎಂಬುವರ ಭೇಟಿ ಯಾಯಿತು. ಅವರು ಎಟ್ಟಯಾಪುರದವರು. ಕವಿ ಭಾರತಿಯಾರರು ಅದೇ ಊರಿನವ ರಾಗಿದ್ದುದರಿಂದ ಅವರಿಗೆ ಸಾಕಷ್ಟು ಹತ್ತಿರದ ಪರಿಚಯವಿತ್ತು. ರಾಮಲಿಂಗಮ್ ಅವರಿಗೆ ಭಾರತಿಯಾರರನ್ನು ಕಂಡು ಮಾತನಾಡಿಸಬೇಕೆಂಬ ತೀವ್ರ ಆಸೆಯನ್ನು ಈಡೇರಿಸಲು ಅವರು ಮುಂದೆ ಬಂದರು. ಭಾರತಿಯಾರರು ಕಾನಾಡುಕಾತ್ತಾನ್ ಎಂಬ ಸ್ಥಳದಲ್ಲಿ ಸ್ವಲ್ಪಕಾಲ ತಂಗಲಿರುವ ಸುದ್ದಿಯನ್ನು ತಿಳಿದು ಇಬ್ಬರೂ ಒಂದು ದಿನ ಎತ್ತಿನಗಾಡಿಯಲ್ಲಿ ಹನ್ನೆರಡು ಮೈಲಿ ದೂರ ಪ್ರಯಾಣ ಮಾಡಿ ಸಂಜೆಯ ವೇಳೆಗೆ ಅಲ್ಲಿ ಸೇರಿದರು. ದಾರಿಯುದ್ದಕ್ಕೂ ತಾವು ನಾಟಕಗಳಿಗಾಗಿ ರಚಿಸಿದ್ದ ಅನೇಕ ತಮಿಳು ಹಾಡುಗಳನ್ನು ರಾಮಲಿಂಗಮ್ ಹಾಡಿದರು. ಅವುಗಳಲ್ಲಿ ರಾಮನು ಹಾಡುವ ಒಂದು ಹಾಡು: ಸೀತೆಯನ್ನು ಹುಡುಕಲು ಸುಗ್ರೀವನ ಸಹಾಯಕ್ಕಾಗಿ ಲಕ್ಷ್ಮಣನನ್ನು ಕಿಷ್ಕಿಂಧೆಗೆ ಕಳುಹಿಸಿದ ನಂತರ ಒಂಟಿಯಾಗಿ ದುಃಖತಪ್ತನಾಗಿ ಕುಳಿತು ಹೇಳುವ ಗೀತೆ ಕಣ್ಣೀರು ಮಿಡಿಸಿತು. ವೆಂಕಟಕೃಷ್ಣ ಐಯರ್ ಅವರ ಹೃದಯ ಅದು ತಟ್ಟಿತು. ರಾಮಲಿಂಗಮ್ ಅವರನ್ನು ಪರಿಚಯಿಸಿ ಅವರೊಬ್ಬ ಚಿತ್ರಕಲಾವಿದರು ಹಾಗೂ ಕವಿ ಗಳೆಂದು ಹೇಳಿದರು. ಇದನ್ನು ತಿಳಿದ ಭಾರತಿಯಾರರು ಒಂದು ಸ್ವರಚಿತ ಗೀತೆಯನ್ನು ಹಾಡಲು ಕೇಳಿದರು. ರಾಮಲಿಂಗಮ್ ಅವರು ಹಿಂದುಮುಂದು ಯೋಚಿಸುತ್ತಿದ್ದಾಗ

ದಾರಿಯಲ್ಲಿ ಹಾಡಿದ ಆ ಹಾಡನ್ನು ಹಾಡುವಂತೆ ವೆಂಕಟಕೃಷ್ಣ ಐಯರ್ ಅವರು ಸೂಚಿಸಿದರು. ಆ ಹಾಡಿನ ಮೊದಲನೆಯ ಚರಣವನ್ನು ಹಾಡಿದರು. ಅದರ ಭಾವಾನುವಾದವನ್ನು ಹೀಗೆ ಮಾಡಬಹುದು :

"ತಮ್ಮ ಸ್ವಂತ ನೆಲವನ್ನು ಪರಕೀಯರಿಗೆ ಆಳಲು ಬಿಟ್ಟು ಭಕ್ತಿಯಿಂದ ಕೈಕಟ್ಟಿ ಕುಳಿತವರನ್ನು ಕಂಡು ಲೋಕ ನಿಂದಿಸದೆ ? ಗೇಲಿಮಾಡುವುದಿಲ್ಲವೆ ? ಬಂಧು ಬಳಗ ತಿನ್ನಲು ಗತಿಯಿಲ್ಲದೆ ಸೊರಗಿ ನರಳುತ್ತಿರುವಾಗ, ತಮ್ಮ ಹೆಂಡಿರು ಪರರ ಮನೆಯಲ್ಲಿ ಎದೆಯೊಡೆದು ನಿಸ್ಸಹಾಯಕರಾಗಿ ಕೊರಗುತ್ತಿರುವಾಗ, ತಾವು ಇಷ್ಟಾನುಸಾರ ತಿಂದು, ಕುಡಿದು ತೇಗುವಂತಹ ಜನರು ಎಂದೆಂದೂ ಇಹಲೋಕದಲ್ಲಿ ಮಾತ್ರವಲ್ಲ ಪರಲೋಕದಲ್ಲಿಯೂ ಸಲ್ಲುವುದಿಲ್ಲ."

ಮೊದಲನೆಯ ಸಾಲನ್ನು ಕೇಳುತ್ತಿರುವಾಗಲೆ ಕವಿ ಭಾರತಿಯಾರರಿಗೆ ಬ್ರಿಟಿಷರ ದಬ್ಬಾಳಿಕೆಯಲ್ಲಿ ಭಾರತೀಯರು ಕೊರಗುತ್ತಿರುವ ದೃಶ್ಯ ಕಣ್ಮುಂದೆ ಬಂದು ನಿಂತಿತು. ಪೂರ್ತಿ ಹಾಡುವವರೆಗೆ ಅವರಿಗೆ ತಡೆಯಲಾಗಲಿಲ್ಲ. ಮೇಲೆದ್ದು ರಾಮಲಿಂಗಮ್ ಅವರನ್ನು ಅಪ್ಪಿಕೊಂಡು, "ಭಲೇ ಪಾಂಡಿಯಾ ನೀನು ನಿಜವಾಗಿಯೂ ಕವಿ. ಅದರಲ್ಲಿ ಸ್ವಲ್ಪವೂ ಅನುಮಾನವಿಲ್ಲ" ಎಂದು ಕೊಂಡಾಡಿದರು. ತಮಿಳುನಾಡಿನ ಸುಪ್ರಸಿದ್ಧ ಕವಿವರ್ಯರ ಈ ಉತ್ತೇಜಕ ಮಾತುಗಳು ಕುಡಿಯೊಡೆಯುತ್ತಿರುವ ಕವಿಗೆ ಸ್ಫೂರ್ತಿ ನೀಡಿದವು. ಅಂದಿನಿಂದ ಹೃತ್ಪೂರ್ವಕವಾಗಿ ತಮ್ಮ ಆತ್ಮವನ್ನು ತಮಿಳು ಕಾವ್ಯಕ್ಕಾಗಿಯೂ ದೇಶದ ಸ್ವಾತಂತ್ರ್ಯಕ್ಕಾಗಿಯೂ ಅವರು ಅರ್ಪಿಸಿದರು.

## ರಾಜಕೀಯ ಸಂತ್ರಸ್ತ

ರಾಷ್ಟ್ರೀಯ ಹೋರಾಟದಲ್ಲಿ ಅವರು ಮೊದಲಿನಿಂದಲೂ ಭಾಗವಹಿಸುತ್ತಲೇ ಬಂದಿದ್ದರು. ಆದರೆ ಒಮ್ಮೆಯೂ ಅವರು ಸೆರೆವಾಸವನ್ನು ಅನುಭವಿಸಿರಲಿಲ್ಲ. 1932ರ ಸತ್ಯಾಗ್ರಹದಲ್ಲಿ ಭಾಗವಹಿಸಿದ ಅವರನ್ನು ಬಂಧಿಸಲೇಬೇಕಾಗಿ ಬಂತು. ನಾಮಕ್ಕಲ್ ಸಬ್ ಡಿವಿಜನ್ ಮ್ಯಾಜಿಸ್ಟ್ರೇಟರು ಅಸಹಕಾರ ಚಳುವಳಿಯ ಎರಡು ಆರೋಪಗಳನ್ನು ಅವರ ಮೇಲೆ ಹೊರಿಸಿ ಒಂದು ವರ್ಷದ ಸೆರೆವಾಸದ ದಂಡನೆ ವಿಧಿಸಿದರು. ವೇಲೂರು ಮತ್ತು ಮಧುರೈ ಸೆರೆಮನೆಗಳಲ್ಲಿ 'ಬಿ' ದರ್ಜೆ ಬಂಧಿಯಾಗಿ ಅವರು ಇದನ್ನು ಕಳೆದರು. ವೇಲೂರಿನ ಸೆರೆಮನೆಯಲ್ಲಿರುವಾಗ ತಮ್ಮ ಸಹೋದರಿಯ ಹಠಾತ್ ನಿಧನದ ಸುದ್ದಿ ಕೇಳಿ ಅವರು ಸ್ವಲ್ಪ ಸಮಯ ಅಸ್ವಸ್ಥರಾದರು. ಜೊತೆಗೆ ಸೆರೆಮನೆಯಲ್ಲಿ ಅವರಿಗೆ ಕೊಡುತ್ತಿದ್ದ ಕಳಪೆ ಮಟ್ಟದ ಆಹಾರವೂ ಒಂದು ಕಾರಣವಾಗಿತ್ತು. ಕೆಲವೇ ದಿನಗಳಲ್ಲಿ ಚೇತರಿಸಿಕೊಂಡರು. ಶ್ರೀ ಅನಂತಾಚಾರಿಯರ್ ಎಂಬ ಸಹ ಬಂಧಿಯೊಬ್ಬರು ಪ್ರತಿದಿನ ತಿರುಕ್ಕುರಳ್ ಮತ್ತು ಕಂಬರಾಮಾಯಣಮ್ ಕುರಿತು ಮಾಡುತ್ತಿದ್ದ ವ್ಯಾಖ್ಯಾನಗಳು ಕವಿವರ್ಯರ ಆರೋಗ್ಯದ ಸುಧಾರಣೆಗೆ ಸ್ವಲ್ಪ

ಮುಟ್ಟಿಗೆ ಕಾರಣವಾಯಿತು. ಮಧುರೆಯ ಶ್ರೀ ವೈದ್ಯನಾಥ ಐಯರ್ ಅವರು ಕವಿವರ್ಯರಿಗೆ ಒಂದು ಖಾಲಿ ಚೆಕ್ ಕೊಟ್ಟು ಆರೋಗ್ಯ ಹಾಗೂ ಭೌದ್ಧಿಕ ಸಂಧಾರಣೆಗಾಗಿ ಬೇಕಾಗುವ ಉತ್ತಮ ಆಹಾರ ವಸ್ತುಗಳನ್ನು, ಗ್ರಂಥಗಳನ್ನು ಕೊಂಡುಕೊಳ್ಳಲು ಹೇಳಿದರು. ತಿರುಕ್ಕುರಳ್ ಕುರಿತು ಪ್ರಕಟವಾಗಿದ್ದ ಎಲ್ಲಾ ಟೀಕೆ ಟಿಪ್ಪಣಿಗಳನ್ನು ಅವರು ತರಿಸಿಕೊಂಡು ಓದಿ, ಗ್ರಂಥಕ್ಕೆ ತಮ್ಮದೇ ಹೊಸದಾದ ವ್ಯಾಖ್ಯಾನವನ್ನು ಬರೆಯತೊಡಗಿದರು. ಹೀಗೆ ಬರೆಯಲು ಅವರ ಸಹ ಸೆರೆವಾಸಿಗಳು ಅವರನ್ನು ಒತ್ತಾಯ ಮಾಡಿದರು. ಏಕೆಂದರೆ ಪರಿಮೇಲಳಿಗಲ್ ಅವರು ತಿರುಕ್ಕುರಳ್ ಕುರಿತು ಬರೆದಿದ್ದ ಒಂದು ವ್ಯಾಖ್ಯಾನವು ಮಾತ್ರ ಆಗ ಪ್ರಚಾರದಲ್ಲಿತ್ತು. ಅದು ಅತಿ ಕ್ಲಿಷ್ಟವಾದ ಭಾಷೆಯಲ್ಲಿದ್ದು ಸಾಮಾನ್ಯ ಜನರಿಗೆ ಅರ್ಥವಾಗುತ್ತಿರಲಿಲ್ಲ. ಅಲ್ಲದೆ ಅದರ ಕೆಲವು ಹೇಳಿಕೆಗಳು ತೀರಾ ಅಸಂಗತವಾಗಿದ್ದವು.

ಹೀಗೆ ಸಿದ್ಧವಾದ ಈ ಗ್ರಂಥವು ನಂತರ 1935ರಲ್ಲಿ ಕೊಯಮುತ್ತೂರಿನಲ್ಲಿ ಪ್ರಕಟವಾಯಿತು. ಕವಿವರ್ಯರ ಅಭಿಪ್ರಾಯಗಳು ಸ್ಪಷ್ಟವಾಗಿರುವುದರಿಂದ ಗ್ರಂಥವು ಬಹುಜನರ ಮೆಚ್ಚುಗೆ ಪಡೆಯಿತು. ಇದು ಕವಿವರ್ಯರ ಮಹತ್ಕೃತಿಯೂ ಆಗಿದೆ. ಇವರ ಮೊಟ್ಟಮೊದಲನೆಯ ಕೃತಿ 'ಮಲೈ ಕಳ್ಳನ್' (ಬೆಟ್ಟದ ಕಳ್ಳ) ಕಾದಂಬರಿ ವೇಲೂರಿನ ಸೆರೆಮನೆಯಲ್ಲಿದ್ದಾಗ ಬರೆದು ಸಿದ್ಧಪಡಿಸಿದ ಗ್ರಂಥ. ತಮಿಳು ಸಂಘ ನೆಲೆಸಿದ್ದ ಮಧುರೆಯಲ್ಲಿ ಕುಳಿತು ತಿರುಕ್ಕುರಳಿಗೆ ವ್ಯಾಖ್ಯಾನ ಬರೆದದ್ದು ಕವಿವರ್ಯರಿಗೆ ಹೆಮ್ಮೆಯೆನಿಸಿತ್ತು. ಕಾರಣ ತಿರುಕ್ಕುರಳ್ ಕರ್ತೃವಾದ ತಿರುವಳ್ಳುವರ್ ಸೇರಿದಂತೆ ಅನೇಕ ಮಹಾಕವಿಗಳು ಅಲ್ಲಿ ಒಟ್ಟಾರೆ ನೆಲೆಸಿ ತಮಿಳು ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಕುರಿತು ಸಂಶೋಧನೆ ನಡೆಸಿದ ಸ್ಥಳ ಅದು.

## ಫಲಾನುಭವ

ಕವಿವರ್ಯರ ಜೀವನದ ಉತ್ತರಾರ್ಧ ವಿವರಿಸಲು ಅಷ್ಟೇನೂ ದೀರ್ಘವಾಗಿಲ್ಲ. ಅವರು ಇದುವರೆಗೆ ಪಟ್ಟ ಕಷ್ಟಗಳಿಗೆ ಪ್ರತಿಫಲ ಲಭಿಸಲಾರಂಭಿಸಿತು; ಅದೃಷ್ಟ ಒಲಿಯಿತು. ಸನ್ಮಾನ, ಬಿರುದು ಒಂದರ ಮೇಲೊಂದು ಬರಲಾರಂಭಿಸಿದುವು. ಇದೇ ಅವಧಿಯಲ್ಲಿ ಅವರ ಬಹುತೇಕ ಅಪ್ರಕಟಿತ ಕೃತಿಗಳು ಅಚ್ಚಾಗಿ ಹೊರಬಂದವು. ಸ್ವಾತಂತ್ರ್ಯ ಹೋರಾಟ ಮುಗಿದ ಕಾರಣ ಅವರಿಗೆ, ಕವಿತೆ, ಪ್ರಬಂಧ ಹಾಗೂ ಕಾದಂಬರಿಗಳನ್ನು ಬರೆಯಲು ಸಾಕಷ್ಟು ಸಮಯಾವಕಾಶ ದೊರೆಯಿತು. ಈಗಾಗಲೇ ಸಿದ್ಧಪಡಿಸಲಾಗಿದ್ದ ಆದರೆ ಧೂಳು ಹಿಡಿದಿದ್ದ ಅನೇಕ ದೇಶಭಕ್ತಿ ಗೀತೆಗಳು, ಆತ್ಮಚರಿತ್ರೆ, ಅಲ್ಲದೆ 'ಮಲೈ ಕಳ್ಳನ್' ಮತ್ತು 'ಅವಳುಮ್ ಅವನುಮ್' ಕಾದಂಬರಿಗಳು ಚಿನ್ನ ಅಣ್ಣಾಮಲೈ ಎಂಬುವರು 1939ರಲ್ಲಿ ಸ್ಥಾಪಿಸಿದ 'ತಮಿಳ್ ಪಣ್ಣೈ' ಎಂಬ ಪ್ರಕಾಶನ ಸಂಸ್ಥೆಯಿಂದ ಅಚ್ಚಾಗಿ ಹೊರಬಂದುವು. ಅದರ ನಂತರ ಪಳನಿಯಪ್ಪ ಬ್ರದರ್ಸ್ 'ಇನ್ಬ ನಿಲಯಮ್', 'ಭಾರತಿ ಪತಿಪ್ಪಗಮ್' ಅವರ ಕೃತಿಗಳನ್ನು ಅಚ್ಚು

ಮಾಡಲು ಮುಂದೆ ಬಂದರು. 1952 ರಲ್ಲಿ ಅವರ ಹಿರಿಯ ಮಗ ಅಮೃತಲಿಂಗಮ್ ಅವರು ಕೊಯಂಬತ್ತೂರಿನಲ್ಲಿ ಸ್ಥಾಪಿಸಿದ್ದ 'ಕವಿಞರ್ ಪತಿಪ್ಪಗಮ್' ಎಂಬ ಪ್ರಕಾಶನ ಸಂಸ್ಥೆಯ ಪರವಾಗಿ ಕೆಲವು ದೇಶಭಕ್ತಿ ಗೀತೆಗಳ ಸಂಕಲನವನ್ನು ಪ್ರಕಟಿಸಿದರು. ಕವಿವರ್ಯರ ಎಲ್ಲ ಕವಿತೆಗಳ ಸಮಾಹಾರವನ್ನು ಪ್ರಕಟಪಡಿಸಿದ ಕೀರ್ತಿ ತ್ಯಾಗರಾಯ ನಗರದ ಲಿಫ್‌ಕೋ ಕಂಪನಿಗೆ ಸಲ್ಲುತ್ತದೆ (1960).

1944 ರಿಂದಲೆ ಮದರಾಸು ಪ್ರಾಂತ್ಯದ ಎಲ್ಲಾ ಭಾಗಗಳಿಂದ ಅವರಿಗೆ ಕೀರ್ತಿ ಬರಲಾರಂಭಿಸಿತು. ಬೆಂಗಳೂರು ಸೇವಾಶ್ರಮ ಶಾಲೆಯ ಹಿರಿಯ ವಿದ್ಯಾರ್ಥಿಗಳ ಕೂಟ, ಕೋಲಾರದ ಪಾನನಿರೋಧ ಸಂಘ, ಬೆಂಗಳೂರಿನ ವಿದ್ಯಾದಾನ ಸಭಾ, ಮೈಸೂರು ತಮಿಳು ಸಂಘ ಮುಂತಾದವು ಅವರನ್ನು ಅದ್ದೂರಿಯಾಗಿ ಸನ್ಮಾನಿಸಿದುವು. ಮೈಸೂರು ತಮಿಳು ಸಂಘದ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಈ ಎಲ್ಲಾ ಸಮಾರಂಭಗಳು 1944 ರಲ್ಲಿ ನಡೆದುವು ಎಂಬ ಅಂಶ ಗಮನಾರ್ಹ. 1945, ಆಗಸ್ಟ್ 11 ರಂದು ಮದರಾಸಿನ ಪೌರರ ಪರವಾಗಿ ಗೋಖಲೆ ಹಾಲಿನಲ್ಲಿ ಸನ್ಮಾನ ಏರ್ಪಡಿಸಿ ನಿಧಿಯನ್ನು ಅರ್ಪಿಸಿ ಕವಿವರ್ಯರನ್ನು ಸನ್ಮಾನಿಸಲಾಯಿತು. ಕಾಮರಾಜ ನಾಡಾರ್, ವಿ. ಕಲ್ಯಾಣ ಸುಂದರ ಮುದಲಿಯಾರ್, ಪಿ. ರಾಮಮೂರ್ತಿ, ಕಲ್ಕಿ ಕೃಷ್ಣಮೂರ್ತಿ ಮುಂತಾದವರು ಇವರನ್ನು ಸಮಾರಂಭದಲ್ಲಿ ಕೊಂಡಾಡಿದರು. ಮತ್ತೆ ಆಗಸ್ಟ್ 19 ರಂದು ಮದರಾಸಿನ ಮಹಾನಗರಪಾಲಿಕೆ ಅವರನ್ನು ಸನ್ಮಾನಿಸಿತು. ನಂತರ ಸನ್ಮಾನಗಳ ಸರಮಾಲೆ ತಮಿಳುನಾಡಿನಾದ್ಯಂತ ಹಾಗೂ ಸಿಲೋನ್ ಮುಂತಾದೆಡೆಗಳಲ್ಲಿ ನಡೆಯಿತು. ಕೊಯಂಬತ್ತೂರು (1946), ನಂಜಿನಾಡು (1947, ಫೆಬ್ರುವರಿ), ಮಧುರೈ (ಸೆಪ್ಟೆಂಬರ್, 1947). ಸಿಲೋನ್ (ಆಗಸ್ಟ್ 1947), ನಾಮಕ್ಕಲ್ (ಅಕ್ಟೋಬರ್, 1947), ತಿರುನೆಲ್‌ವೇಲಿ (1948), ಕೊಯಂಬತ್ತೂರು (ಫೆಬ್ರುವರಿ, 1949), ಕರೂರು (ಜೂನ್, 1950).

1947 ಅಕ್ಟೋಬರ್‌ನಲ್ಲಿ ಎಟ್ಟಯಾಪುರಮ್‌ನಲ್ಲಿ ಕಲ್ಕಿ, ರಾಜಾಜಿ ಮುಂತಾದವರ ಪ್ರಯತ್ನದಿಂದ ಭಾರತಿಯಾರರ ಸ್ಮಾರಕ ಭವನ ಪ್ರಾರಂಭೋತ್ಸವ ನಡೆದಾಗ ಆ ಸಮಾರಂಭದಲ್ಲಿ ಕವಿವರ್ಯರು ಭಾಗವಹಿಸಿದರು. ರಾಜಾಜಿಯವರು ಸಮಾರಂಭದಲ್ಲಿ ನಾಮಕ್ಕಲ್ ಕವಿವರ್ಯರಿಗೆ ಪುಷ್ಪಹಾರವನ್ನು ಅರ್ಪಿಸಿ ಗೌರವಿಸಿದರು.

1949ರಲ್ಲಿ ಶ್ರೀ ಸುಬ್ಬಣ್ಣ ಗೌಂಡರ್ ಅವರ ಆತಿಥ್ಯದಲ್ಲಿ ಗೋಬಿಚೆಟ್ಟಿ ಪಾಳಯಮ್‌ನಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಊಟದನಂತರ ಚಿನ್ನ ಅಣ್ಣಾಮಲೈ ಅವರು ಕೆಲವು ದೇಶಭಕ್ತಿ ಗೀತೆಗಳನ್ನು ಹಾಡಿ ಪ್ರತಿನಿಧಿಗಳಿಗೆ ಮನರಂಜನೆ ನೀಡಿದರು. ಓಮಂದೂರ್ ರಾಮಸ್ವಾಮಿ ರೆಡ್ಡಿಯಾರ್ ಅವರಿಗೆ ಆ ದೇಶಭಕ್ತಿ ಗೀತೆಗಳು ತುಂಬಾ ಮೆಚ್ಚುಗೆಯಾದವು. ಭಾರತಿಯಾರರ ಆ ಗೀತೆಗಳು ಬಹಳ ಚೆನ್ನಾಗಿವೆ ಎಂದು ಅವರು ಪ್ರಶಂಸಿಸಿದರು. ತಾವು ಹಾಡಿದ ಆ ಗೀತೆಗಳು

ಭಾರತಿಯಾರರ ರಚನೆಯಲ್ಲವೆಂದೂ ಜೀವಂತವಾಗಿ ನಮ್ಮ ಮಧ್ಯೆ ಇರುವ ನಾಮಕ್ಕಲ್ ರಾಮಲಿಂಗಮ್ ಪಿಳ್ಳೆಯವರ ರಚನೆಯೆಂದು ಅಲ್ಲಿದ್ದವರೆಲ್ಲರಿಗೂ ಸ್ಪಷ್ಟಪಡಿಸಿದರು. ಎಲ್ಲರಿಗೂ ಅತ್ಯಾಶ್ಚರ್ಯ, ಸಂತೋಷ. ಚುರುಕು ಬುದ್ಧಿಯ ಪತ್ರಿಕೋದ್ಯಮಿ ಎಂದು ಪ್ರಸಿದ್ಧರಾಗಿದ್ದ ಕಲ್ಕಿ ಕೃಷ್ಣಮೂರ್ತಿಯವರು ಸಮಾವೇಶದಲ್ಲಿ ಭಾಗವಹಿಸಿದ್ದ ಪ್ರತಿನಿಧಿಗಳನ್ನು ಕುರಿತು ಮಾತನಾಡುತ್ತಾ, "ಕವಿ ಭಾರತಿಯಾರರು ಜೀವಂತರಾಗಿದ್ದ ಕಾಲದಲ್ಲಿ ಮದರಾಸು ಸರಕಾರ ಅವರಿಗೆ ಯಾವುದೇ ಸೌಲಭ್ಯ ಒದಗಿಸಲಿಲ್ಲ, ಉದಾಸೀನ ಮಾಡಿತು. ಇದಕ್ಕೆ ಪಶ್ಚಾತ್ತಾಪಪಟ್ಟು ಈಗಲಾದರೂ ಜೀವಂತವಾಗಿರುವ ಕವಿ ನಾಮಕ್ಕಲ್ ರಾಮಲಿಂಗಮ್ ಅವರಿಗೆ ಏನಾದರೂ ಭತ್ಯೆ ರೂಪದಲ್ಲಿ ಸಹಾಯಮಾಡಿ ಗೌರವಿಸಬಹುದಲ್ಲವೆ ?" ಎಂದು ಸಲಹೆ ನೀಡಿದರು.

ಈ ಸಲಹೆಯನ್ನು ಎಲ್ಲರೂ ಬಹಳ ಸಂತೋಷದಿಂದ ಒಪ್ಪಿದರು. ಸಲಹೆಯನ್ನು ಮೆಚ್ಚಿದರು. ರಾಮಸ್ವಾಮಿ ರೆಡ್ಡಿಯಾರ್ ಅವರು ಮದರಾಸು ಪ್ರಾಂತ್ಯದ ಮುಖ್ಯ ಮಂತ್ರಿಗಳಾದಾಗ ಕವಿವರ್ಯರಿಗೆ ರಾಷ್ಟ್ರಕವಿ ಗೌರವ ನೀಡಿ ಸನ್ಮಾನಿಸಿ ವಾರ್ಷಿಕ ಸಹಾಯಧನ ಐದು ಸಾವಿರ ರೂಪಾಯಿಗಳು ಕೊಡುವಂತೆ ಆದೇಶ ನೀಡಿದರು. ಇದನ್ನು ಅನುಸರಿಸಿ ಜೊತೆಗೆ ತೆಲುಗು, ಕನ್ನಡ ಮತ್ತು ಮಲಯಾಳಂ ಹಾಗೂ ಸಂಸ್ಕೃತ ಭಾಷಾ ಕವಿಗಳಿಗೂ ಇಂತಹುದೇ ಗೌರವ ಹಾಗೂ ಸಹಾಯಧನವನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು. ಇದು ಕಾರ್ಯರೂಪಕ್ಕೆ ಬರುವ ಮುಂಚೆಯೇ ರೆಡ್ಡಿಯಾರ್ ಅವರು ಮುಖ್ಯಮಂತ್ರಿ ಹುದ್ದೆಯನ್ನು ತ್ಯಜಿಸಬೇಕಾಯಿತು. ಅವರ ಸ್ಥಾನದಲ್ಲಿ ಶ್ರೀ ಕುಮಾರಸ್ವಾಮಿ ರಾಜಾ ಅವರು ಮುಖ್ಯಮಂತ್ರಿಗಳಾದರು. 1949ರ ಆಗಸ್ಟ್ 15 ರಂದು ಮದರಾಸಿನ ರಾಜಾಜಿ ಹಾಲಿನಲ್ಲಿ ನಡೆದ ಅದ್ದೂರಿ ಸಮಾರಂಭ ದಲ್ಲಿ ಮದರಾಸಿನ ಅಂದಿನ ರಾಜ್ಯಪಾಲ ಭಾವನಗರ ಮಹಾರಾಜರು ಕವಿ ರಾಮಲಿಂಗಮ್ ಪಿಳ್ಳೆಯವರಿಗೆ 'ತಮಿಳು ರಾಷ್ಟ್ರಕವಿ' ಪ್ರಶಸ್ತಿ ನೀಡಿ ಸನ್ಮಾನಿಸಿದರು. ಹಾಗೆಯೇ ರಾಷ್ಟ್ರಕವಿ ಪ್ರಶಸ್ತಿಯನ್ನು ತೆಲುಗು, ಕನ್ನಡ, ಮಲಯಾಳಮ್ ಮತ್ತು ಸಂಸ್ಕೃತ ಭಾಷೆಗಳಿಗೆ ಕ್ರಮವಾಗಿ ಚೆಲ್ಲಪಿಳ್ಳೆಶಾಸ್ತ್ರಿ, ಗೋವಿಂದ ಪೈ, ವಲ್ಲತ್ತೋಳ್ ನಾರಾಯಣ ಮೆನನ್ ಹಾಗೂ ಕೆ. ಎಸ್. ಕೃಷ್ಣಮೂರ್ತಿಯವರಿಗೆ ನೀಡಿ ಸನ್ಮಾನಿಸಲಾಯಿತು. ಅಂದಿನ ಶಿಕ್ಷಣ ಸಚಿವ ಮಾಧವ ಮೆನನ್ ಅವರು ಗೌರವ ಪ್ರಶಸ್ತಿಗಳನ್ನು ವಾಚನ ಮಾಡಿದರು. ಕವಿ ರಾಮಲಿಂಗಮ್ ಅವರನ್ನು ಪ್ರಶಂಸಿಸಿ ಅವರು ಮಾತನಾಡುತ್ತಾ ಕವಿವರ್ಯರು ಗಾಂಧೀಜಿಯವರನ್ನು ಕುರಿತು ಮಾತ್ರವಲ್ಲ ಹಾಡಿರುವುದು, ವಲ್ಲಭಭಾಯಿ ಪಟೇಲ್, ಬಾಲಗಂಗಾಧರ ತಿಲಕ್ ಮುಂತಾದ ರಾಷ್ಟ್ರನಾಯಕರನ್ನು ಕುರಿತು ಹಾಡಿ ದ್ದಾರೆ ಎಂದರು. ಇಂಗ್ಲಿಷಿನಲ್ಲಿ ಸ್ವೀಕಾರ ಭಾಷಣ ಮಾಡಿದ ಕವಿ ರಾಮಲಿಂಗಮ್ ಅವರು ತಮಗೆ ದೊರೆತಿರುವ ಇಂತಹ ಗೌರವ ನಿಜವಾಗಿಯೂ ಗಾಂಧಿಯವರಿಗೆ ಸಂದ ಗೌರವವೆಂದು ತಾವು ಪರಿಗಣಿಸುವುದಾಗಿಯೂ ಏಕೆಂದರೆ ಗಾಂಧೀಜಿಯವರನ್ನು ಕುರಿತು ತಾವು ಇದುವರೆಗೂ ಹಾಡುತ್ತಿದ್ದುದಾಗಿಯೂ ನುಡಿದು :

"ತಮಿಳು ಒಂದು ಉದಾರ ಭಾಷೆಯೆಂದೂ ಅದು ಎಂದೂ ತನ್ನದೇ ಎಲ್ಲೆಕಟ್ಟಿನಲ್ಲಿ ಉಳಿಯಲಿಲ್ಲ"ವೆಂದೂ ಹೇಳಿದರು. "ಪ್ರಪಂಚದ ಎಲ್ಲಾ ಭಾಷೆ, ಸಂಸ್ಕೃತಿಗಳಿಂದ ಪ್ರತಿಭೆಗಳನ್ನು ತಮ್ಮ ಸ್ವಂತಭಾಷೆಯಲ್ಲಿ ಹೊಂದಿಸಿಕೊಂಡು ಹೋಗುತ್ತಾ, ಅರಗಿಸಿ, ಅಡಗಿಸಿಕೊಂಡಿದೆ. ಯಾವುದೋ ಯೋಗದಂತೆ ಇಂದು ದಕ್ಷಿಣ ಭಾಷೆಗಳಿಗೆ ಸೇರದ ಭಾವನಗರದ ಸನ್ಮಾನ್ಯ ಮಹಾರಾಜರು ಈ ಸಮಾರಂಭದ ಅಧ್ಯಕ್ಷತೆ ವಹಿಸಿರುವುದು, ದಕ್ಷಿಣ ಭಾರತದ ಕವಿಗಳನ್ನು ಸನ್ಮಾನಿಸುತ್ತಿರುವುದು ಬಹಳ ಸಂತೋಷ ತರುವ ಸಂಗತಿಯಾಗಿದೆ. ಈ ಸಮಾರಂಭದಿಂದ ನಾವು ಕಲಿಯಬೇಕಾದ ಒಂದು ಪಾಠವೂ ಇದೆ– ಉತ್ತರ ದಕ್ಷಿಣ, ಪೂರ್ವ ಪಶ್ಚಿಮ ಭಾರತವೆಲ್ಲಾ ಅಖಂಡ ಎಂಬುದು. ಭಾರತವು ವಿಶ್ವಮಾನವತ್ವಕ್ಕೆ ಸಲ್ಲಿಸಬೇಕಾದ ಕಾಣಿಕೆ ಇನ್ನೂ ಹೆಚ್ಚಾಗಿದೆ. ಅದೇ ವಾಸ್ತವವಾಗಿ ಕಾವ್ಯದ ಮುಖ್ಯ ಉದ್ದೇಶವೂ ಆಗಿದೆ."

ರಾಜಾಜಿಯವರು ಮದರಾಸಿನ ಮುಖ್ಯಮಂತ್ರಿಗಳಾದ ಮೇಲೆ ಕವಿವರ್ಯರಿಗೆ ದೊರೆಯುತ್ತಿದ್ದ ಒಂದು ಸಾವಿರ ರೂಪಾಯಿಗಳ ಭತ್ಯೆಯನ್ನು ಆರ್ಥಿಕ ಉಳಿತಾಯ ಕಾರಣಕ್ಕಾಗಿ ನಿಲ್ಲಿಸಿದರು. ಆದರೆ ಪ್ರಶಸ್ತಿಯನ್ನು ತಪ್ಪಿಸಲಿಲ್ಲ. ಕಾಮರಾಜರು ಮುಖ್ಯಮಂತ್ರಿಗಳಾದಾಗ ಈ ನಷ್ಟಕ್ಕೆ ಪರಿಹಾರ ರೂಪದಲ್ಲಿ ಕವಿವರ್ಯರನ್ನು ವಿಧಾನ ಪರಿಷತ್ತಿನ ಸದಸ್ಯರಾಗಿ ನೇಮಕಮಾಡಿದರು. ಅನಂತರ ಮತ್ತೊಂದುಬಾರಿ ಅವರನ್ನು ನಾಮಕರಣ ಮಾಡಲಾಯಿತು. ಇಂತಹ ಸ್ಥಾನ ನಿಜವಾಗಿ ಸಾಹಿತ್ಯಕ್ಕೆ, ದೇಶಭಕ್ತಿಗೆ ದೊರೆತ ಒಂದು ಉತ್ತಮ ಗೌರವವೆಂದು ಪರಿಗಣಿಸಲಾಯಿತು. ಶಾಸನ ಸಭೆಯಲ್ಲಿ ಅವರು ಭಾಷಣ ಮಾಡುತ್ತಾ ಶಿಕ್ಷಣದಲ್ಲಿ ನೈತಿಕತೆ ಹಾಗೂ ಸಮರಸ ಬಾಳ್ವೆಯ ಬಗೆಗೆ ಒತ್ತಿ ಹೇಳಿದರು. ಬ್ರಾಹ್ಮಣರನ್ನು ಅವಹೇಳನ ಮಾಡುವವರನ್ನು ಖಂಡಿಸಿ ತಮಿಳರಲ್ಲಿ ಐಕಮತ್ಯವಿರಬೇಕೆಂದು ಒತ್ತಾಯಿಸಿದರು. 'ಕಲ್ಕಿ' ಪತ್ರಿಕೆ ಸಂಪಾದಕೀಯದಲ್ಲಿ ಕವಿವರ್ಯರನ್ನು ತಮಿಳುನಾಡಿನ ಆಧುನಿಕ 'ನಕ್ಕೀರರ್' ಎಂದು ಕೊಂಡಾಡಿತು. ರಾಜ್ಯ ಸರಕಾರದ ಶಿಫಾರಸಿನಂತೆ ಕವಿವರ್ಯರನ್ನು ಕೇಂದ್ರ ಸರಕಾರ 1953 ರಲ್ಲಿ ಸಾಹಿತ್ಯ ಅಕಾಡೆಮಿಯ ಸದಸ್ಯರನ್ನಾಗಿಯೂ 1954 ರಲ್ಲಿ ಕಾರ್ಯಕಾರಿ ಸಮಿತಿಯ ಸದಸ್ಯರನ್ನಾಗಿಯೂ ನೇಮಕ ಮಾಡಿತು. 1957 ರಲ್ಲಿ ನಡೆದ ಸಾಹಿತ್ಯ ಅಕಾಡೆಮಿಯ ಕಾರ್ಯಕಾರಿ ಸಮಿತಿಯಲ್ಲಿ ಭಾಗವಹಿಸಲು ದೆಹಲಿಗೆ ಹೋದಾಗ ಅವರ ಕುಟುಂಬದವರೆಲ್ಲರನ್ನೂ ಕರೆದೊಯ್ದಿದ್ದರು. ಸಭೆಯಲ್ಲಿ ಪ್ರವೇಶ ಮಾಡುವ ಮುಂಚೆ ಅವರ ಕಿರಿಯ ಮಗ ರಾಜಾವೆಂಕಟರಾಮನ್ ಅವರನ್ನು ಹೊರಗೆ ಕುಳಿತುಕೊಳ್ಳಲು ಹೇಳಿದರು. ಪಂಡಿತ್ ನೆಹರೂ ಅವರು ಸಭಾಭವನ ಪ್ರವೇಶ ಮಾಡುವಾಗ ಕವಿವರ್ಯರ ಜೊತೆಯಲ್ಲಿ ಹುಡುಗನನ್ನು ನೋಡಿ ಬೆನ್ನು ಚಪ್ಪರಿಸಿ ಸಂತೋಷಪಟ್ಟರು, ಒಳಗೆ ಬರುವಂತೆ ಹೇಳಿ ಮಗುವನ್ನು ತಮ್ಮ ಜೊತೆಯಲ್ಲಿಯೇ ಕೂರಿಸಿಕೊಂಡರು. ಕವಿವರ್ಯರಿಗೆ 1971ರಲ್ಲಿ ಪದ್ಮಭೂಷಣ ಪ್ರಶಸ್ತಿ ನೀಡಿ ಗೌರವಿಸಲಾಯಿತು. ತಾವು ಮಾಡಿದ್ದ

ತ್ಯಾಗ ಹಾಗೂ ಸಾಹಿತ್ಯಸೇವೆಗೆ ತಕ್ಕ ಪ್ರತಿಫಲ ದೊರೆಯಿತೆಂದು ಕವಿವರ್ಯರು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದ್ದಾರೆ.

ಸಂಧಿವಾತದ ಪರಿಣಾಮವಾಗಿ ಅವರ ಕಾಲಿನಲ್ಲಿ ತೊಂದರೆಯುಂಟಾಗಿತ್ತು. ಆದ್ದರಿಂದ ಸಮಾರಂಭಗಳಿಗೆ ಹೋಗಿ ಭಾಷಣ ಮಾಡುವುದನ್ನು ಕ್ರಮೇಣ ಕಡಿಮೆ ಮಾಡುತ್ತ ನಿಲ್ಲಿಸಿದರು. ಕಾದಂಬರಿ, ಕವಿತೆ ರಚನೆಯಲ್ಲಿ ಸಮಯ ಕಳೆಯುತ್ತಾ ಬಂದರು. ಆದರೆ ಅವುಗಳಲ್ಲಿ ಮೊದಲಿನ ಉತ್ಸಾಹ, ತೀವ್ರತೆಯು ಕೊರತೆಯಿತ್ತು. ಸಣ್ಣ ಪುಟ್ಟ ಅನಾರೋಗ್ಯದ ನೆವಗಳನ್ನು ಬಿಟ್ಟರೆ ಒಟ್ಟಾರೆ ಕೊನೆಯವರೆಗೂ ಅವರು ಒಳ್ಳೆಯ ಆರೋಗ್ಯವನ್ನು ಕಾಪಾಡಿಕೊಂಡಿದ್ದರು, ಕೊನೆಯುಸಿರು ಎಳೆಯುವ ಒಂದು ವಾರಕ್ಕೆ ಮುಂಚೆ ಅವರು ಮದರಾಸಿನ ಆಕಾಶವಾಣಿಗೆ ಒಂದು ಸಂದರ್ಶನ ನೀಡಿದರು. ಗಾಂಧೀಜಿಯವರ ಬಗೆಗೆ ಅವರು ರಚಿಸಿದ್ದ ಗೀತೆಗಳನ್ನು ಹಾಡಿ ತಮ್ಮ ರಾಜಕೀಯ ಜೀವನದ ಅನೇಕ ಘಟನೆಗಳನ್ನು ವಿವರಿಸಿದರು. 1972 ಆಗಸ್ಟ್ 24 ಹುಣ್ಣಿಮೆ ಯಂದು ಅವರು ಮದರಾಸಿನ ತಮ್ಮ ಅಳಿಯನ ಮನೆಯಲ್ಲಿ ಕೊನೆಯುಸಿರನ್ನು ಎಳೆದರು. ಇದರಿಂದ ಇಡೀ ಅವರ ಕುಟುಂಬಕ್ಕೆ ಆಘಾತವಾಗಿತ್ತು. ಕಾರಣ, ಅಂದು ರಾತ್ರಿ ತಾನೆ ಮೊಮ್ಮಕ್ಕಳ ಜೊತೆಯಲ್ಲಿ ನಲಿದಾಡುತ್ತಾ ದಿನಪತ್ರಿಕೆ ಓದುತ್ತಾ ಅವರು ಕಳೆದಿದ್ದರು. ಆರೋಗ್ಯಸ್ಥಿತಿ ಚೆನ್ನಾಗಿತ್ತು. ಗಣರಾಜ್ಯದ ದಿನವನ್ನು ಕುರಿತ ತಮ್ಮ ಸ್ವಂತ ರಚನೆ ಒಂದು ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಅದನ್ನು ಓದಿ ಸಂತೋಷ ಪಟ್ಟಿದ್ದರು. ಹಠಾತ್ತನೆ ಮಧ್ಯರಾತ್ರಿ ಎರಡು ಗಂಟೆಗೆ ಸರಿಯಾಗಿ ಹೃದಯಬೇನೆ ಯೆಂದು ಹೇಳಿದ ಅವರು 2–30 ಕ್ಕ ವೈದ್ಯರು ಧಾವಿಸಿ ಬರುವ ಮುನ್ನವೇ ಕೊನೆಯುಸಿರನ್ನೆಳೆದರು.

# ಕಾವ್ಯ

ರಾಮಲಿಂಗಮ್ ಪಿಳ್ಳೆಯವರ ಸಾಹಿತ್ಯ ಕೊಡುಗೆ ಹೆಚ್ಚಾಗಿ ಕಾವ್ಯಕ್ಷೇತ್ರಕ್ಕೆ ಮೀಸಲಾಗಿದೆ. ಆರಂಭದಲ್ಲಿ ಕಂಪನಿ ನಾಟಕಗಳಿಗಾಗಿ ಅವರು ರಚಿಸಿಕೊಟ್ಟ ಅನೇಕ ಪದ್ಯಗಳು, ಹಾಡುಗಳು ನಮಗೆ ದೊರಕುವುದಿಲ್ಲವಾದರೂ ಅವರ ರಾಜಕೀಯ ಪ್ರವೇಶದ ನಂತರ ರಚಿತವಾದ ಬಹುಮಟ್ಟಿನ ಗೀತೆಗಳು ಸಂರಕ್ಷಿತವಾಗಿವೆ. ಸ್ವಾತಂತ್ರ್ಯ ಆಂದೋಳನದ ಆಯಾ ಸಂದರ್ಭಕ್ಕನುಗುಣವಾಗಿ ಆಶುಕವಿತೆಯಾಗಿ ಸ್ಫುರಿಸಿ ಬಂದ ಆ ಗೀತೆಗಳಲ್ಲಿ ದೇಶಭಕ್ತಿ, ಉತ್ಕಟ ದೇಶಾಭಿಮಾನ, ಉತ್ಸಾಹ ಉಸಿರಾಡುತ್ತಾ ಬಂದಿವೆ.

ಗಾಂಧೀಜಿಯವರು 1921 ರಲ್ಲಿ ಸ್ವದೇಶೀ ವಸ್ತುಗಳನ್ನು ಉಪಯೋಗಿಸಲು ಭಾರತೀಯರಿಗೆ ಕರೆಯಿತ್ತರು. ಇದಕ್ಕನುಗುಣವಾಗಿ ರಾಮಲಿಂಗಮ್ ಅವರು ರಾಟೆ ಯಿಂದ ನೂಲು ತೆಗೆಯುವ ಸಂದರ್ಭಕ್ಕೆ ಹೆಂಗಸರು ಹಾಡಲು ಅನುಕೂಲಕರವಾದ ಅನೇಕ ಗೀತೆಗಳನ್ನು ರಚಿಸಿದರು. ಇವು ಜನರ ಮೆಚ್ಚುಗೆ ಪಡೆದವು. ಕಲ್ಕಿ ಪತ್ರಿಕೆಯ ಸಂಪಾದಕ ಕೃಷ್ಣಮೂರ್ತಿಯವರು ಇವುಗಳನ್ನು ಕುರಿತು ಹೇಳುತ್ತಾ, 'ರಾಟೆಯನ್ನು ತಿರುಗಿಸುವಂತೆ ಮಾಡಿದ ಈ ಕವಿ ತಮಿಳುನಾಡಿನ ಜನರನ್ನು ಗಾಂಧೀಜಿಯ ತತ್ವಗಳ ಸುತ್ತಲೂ ತಿರುಗುವಂತೆ ಮಾಡಿದರು' ಎನ್ನುತ್ತಾರೆ.

1922 ರಲ್ಲಿ ಅವರ ಕವಿತೆಗಳು 'ದೇಶಭಕ್ತಿ ಪಾಡಲ್‌ಗಳ್' (ದೇಶಭಕ್ತಿ ಗೀತೆ ಗಳು) ಮತ್ತು 'ಪ್ರಾರ್ಥನೈ' (ಪ್ರಾರ್ಥನೆ) ಎಂಬ ಹೆಸರುಗಳಲ್ಲಿ ಸಂಕಲಿತವಾಗಿ ಪ್ರಕಟ ವಾದುವು. 'ಪ್ರಾರ್ಥನೈ' ಸಂಕಲನದ ಎರಡನೆ ಆವೃತ್ತಿಯ ಬಗೆಗೆ ವಿಮರ್ಶಿಸುತ್ತಾ 'ದಿ ಹಿಂದೂ' ಪತ್ರಿಕೆ (16–10–38) "ವಾಕ್ಸರಣಿಯು ಸರಳ, ಮಧುರ ಹಾಗೂ ಸಹಜವಾದ ಉತ್ಸಾಹವನ್ನು ತುಂಬುವ ರೀತಿಯಲ್ಲಿದೆ" ಎಂದು ಉದಾಹರಿಸಿದ್ದಾರೆ:

ನಾನು ಚಂಡಾಲನೆ ?
ಸರಿಯೆ ನಿಮಗಿದು ?
ತಾಯಿಯ ಅಣಕಿಸುವವ ಚಂಡಾಲ
ತಂದೆಯ ದೂಷಿಸುವವ ಚಂಡಾಲ
ಕೂಲಿಯ ಕೊಡದವ ಚಂಡಾಲ
ಚಾಡಿ ಮಾತಲಿ ಬದುಕುವವ ಚಂಡಾಲ

ಈ ಗ್ರಂಥಕ್ಕೆ ಮುನ್ನುಡಿ ಬರೆಯುತ್ತಾ, ರಾಜಾಜಿಯವರು ಮೊಳೆಯುತ್ತಿರುವ ಈ ಯುವಕವಿಗೆ ಪ್ರೋತ್ಸಾಹ ನೀಡುವಂತೆ ತಮಿಳು ಜನತೆಗೆ ಕರೆ ನೀಡಿದ್ದಾರೆ. ಕೆಲವು ಸಂದರ್ಭಗಳಲ್ಲಿ ಅವರ ಸುಬ್ರಹ್ಮಣ್ಯ ಭಾರತಿಯವರ ಕವಿತೆಗಳಿಗಿಂತಲೂ ಉನ್ನತ ಮಟ್ಟದಲ್ಲಿವೆ ಎಂದು ಅವರು ಕೊಂಡಾಡಿದ್ದಾರೆ.

ಚಿನ್ನ ಅಣ್ಣಾಮಲೈ ಅವರು ಅನಂತರ ಕೆಲವು ಗೀತೆಗಳನ್ನು ಆಯ್ದು 'ತಮಿಳನ್ ಇದಯಮ್' (ತಮಿಳನ ಹೃದಯ) ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದರು. ಅದಕ್ಕೆ ಉದಾಹರಣೆಯಾಗಿ 'ವೇದಾರಣ್ಯಮ್' ಉಪ್ಪು ಸತ್ಯಾಗ್ರಹದ ಸಂದರ್ಭದಲ್ಲಿ ಸಾವಿರಾರು ಸತ್ಯಾಗ್ರಹಿಗಳು ಪಾಲ್ಗೊಂಡು ಹಾಡಿದ ಗೀತೆಗಳನ್ನು ನೆನಪಿಸಿಕೊಳ್ಳಬಹುದು (ಈ ಮೊದಲೇ ಓದಿದ್ದೇವೆ). ಇನ್ನೂ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡಬಹುದು :

ಶಂಖವ ಮೊಳಗೋಣ, ಶಂಖವ ಮೊಳಗೋಣ
ಸತ್ಯವು ಚಿರಾಯುವೆಂದು ಶಂಖವ ಮೊಳಗೋಣ
ಶಾಂತಿಯು ಜಯಿಸಲೆಂದು ಶಂಖವ ಮೊಳಗೋಣ
ಭಗವಂತನು ಅವರನೆಂದು ಶಂಖವ ಮೊಳಗೋಣ
ಜೀವನ ನಮ್ಮದು ನಶ್ವರವೆಂದು ಶಂಖವ ಮೊಳಗೋಣ.

— ಸತ್ಯದ ಕಹಳೆ

ದೂಡು, ದೂಡು, ದೂಡು ನಾಡಿನಿಂದಾಚೆ
ಅಸ್ಪೃಶ್ಯತೆಯು ಭೂತವನಟ್ಟು ಆಚೆ
ಸಾರುವೆವು ನಾವೆಲ್ಲ
ಸೋಂಕು ರೋಗಿಗಳ, ಹಾಸಿಗೊಂಡವರ
ಉಪಚಾರ, ಆರೈಕೆ ಎಲ್ಲವೂ ಧರ್ಮವೆಂದು !
ಆತ್ಮ, ದೇಹ ಎಲ್ಲ ಶುದ್ಧಿಯಿದ್ದರೂ
ಕೀಳುಜಾತಿ ಚಾತರೆಂದು
ಅಲ್ಲಗಳೆವೆವು, ದೂರ ಸರಿವೆವು
ಇಂತು ಕೆಲರು ನಮ್ಮಲಿಹರು
ಹುಟ್ಟಿನಲ್ಲಿ ಕಳಂಕ ಹೊತ್ತು

ನಾಯಿ, ಬೆಕ್ಕು, ಕೋತಿ ಕೂಡ
ನಮಗೆ ಅಪ್ಪುಗೆ
ಹೇಸುಗೆಯಲಿಹ ಹಂದಿ ಕೂಡ
ನಮಗೆ ಮೆಚ್ಚುಗೆ

ದೇಹ ಶುದ್ಧಿ, ಆತ್ಮ ಶುದ್ಧಿ
ಎಲ್ಲ ಪಡೆದ ಈ ಜನರು
ದೂರವಿರುವುದೇಕೆ ಈ ಬಗೆ ?

— ಅಸ್ಪೃಶ್ಯತೆಯನು ಹೊರದೂಡು

ಈ ರೀತಿ ನಾಮಕ್ಕಲ್ ರಾಮಲಿಂಗಮ್ ಅವರ ಕವಿತೆಗಳು ಅವರ ಜೀವಿತಕಾಲದಲ್ಲಿಯೇ ತಮಿಳರ ಮೆಚ್ಚುಗೆಯನ್ನು ಪಡೆದವು. ಅವು ಬೇರೆ ಬೇರೆ ಶೀರ್ಷಿಕೆಗಳಲ್ಲಿ ಗ್ರಂಥರೂಪವಾಗಿ ಪ್ರಕಟವಾದವು. 'ಗಾಂಧಿ ಅಂಜಲಿ', 'ಕವಿತಾಂಜಲಿ', 'ಸಂಖೊಲಿ' (ಶಂಖನಾದ) ಹಾಗೂ 'ಮಲರ್‌ನ್ದ ಪೂಕ್ಕಳ್' (ಅರಳಿದ ಹೂವುಗಳು) ಅವುಗಳಲ್ಲಿ ಮುಖ್ಯವಾದವುಗಳು. 'ನಾಮಕ್ಕಲ್ ಕವಿಙರ್ ಪಾಡಲ್‌ಗಳ್' ಎಂಬ ಹೆಸರಿನಲ್ಲಿ ಅವರ ಬಹುಮಟ್ಟಿಗೆ ಎಲ್ಲಾ ಗೀತೆಗಳನ್ನು ಸಂಕಲಿಸಿ ಇತ್ತೀಚೆಗೆ ಮದರಾಸಿನಿಂದ ಒಂದು ಗ್ರಂಥ ಪ್ರಕಟಿಸಲಾಗಿದೆ. ಅವುಗಳಲ್ಲಿ ಅಡಕವಾಗಿರುವ ವಿಷಯುವನ್ನು ಪರಿಗಣಿಸಿ ಹೀಗೆ ವಿಂಗಡಿಸಲಾಗಿದೆ: ದೈವಭಕ್ತಿ, ತಮಿಳು ಮತ್ತು ತಮಿಳು ಸಂಸ್ಕೃತಿಯ ಪ್ರೇಮ, ಗಾಂಧೀಜಿ ಹಾಗೂ ಗಾಂಧೀತತ್ತ್ವ ಭಕ್ತಿ, ದೇಶಭಕ್ತಿ, ಹಿರಿಯರಿಗೆ ತೋರುವ ಭಕ್ತಿ, ಸಮಾಜ, ಉತ್ಸವಾಚರಣೆಗಳು, ಲಘು ಕಾವ್ಯಗಳು, ಹಾಡುಗಬ್ಬಗಳು, ಸಾಮಾನ್ಯ ಉಪದೇಶ ಇತ್ಯಾದಿ.

## ದೈವಭಕ್ತಿ

ಕಟ್ಟಾ ಆಸ್ತಿಕರಾದ ಕವಿ ರಾಮಲಿಂಗಮ್ ಅವರು ಅನೇಕ ದೈವಭಕ್ತಿ ಹಾಡುಗಳನ್ನು ಪದ್ಯಗಳನ್ನು ರಚಿಸಿದ್ದಾರೆ. ಕೃಷ್ಣ, ಮುರುಗ, ಪರಾಶಕ್ತಿ ಮುಂತಾದ ವೈಯುಕ್ತಿಕ ದೇವತೆಗಳನ್ನು ಸ್ತುತಿಸಿ ಹಲವಾರು ಗೀತೆಗಳನ್ನು ರಚಿಸಿದ್ದರೂ ಎಲ್ಲಾ ಮತ ತತ್ತ್ವಗಳಿಗೆ ಸರಿಹೊಂದುವ ಭಗವಂತನ ಏಕೈಕ ಅಸ್ತಿತ್ವದ ಬಗೆಗೆ ಅವರು ಸಾಕಷ್ಟು ಗೀತೆಗಳನ್ನು ರಚಿಸಿದ್ದಾರೆ. ಅವರ ದೃಷ್ಟಿಯಲ್ಲಿ ದೇವನೊಬ್ಬ, ನಾಮ ಹಲವು. ಶಾಲಾ ಮಕ್ಕಳಿಗಾಗಿ ಅವರು ರಚಿಸಿರುವ ಒಂದು ಗೀತೆ ಹೀಗಿದೆ:

ಅಲ್ಲಾ ಎಂಬರು ಹಲವು ಜನ
ಹರಿಹರನೆಂಬರು ಕೆಲವು ಜನ
ಬಲ್ಲವನವನಿಹ ನಾಕದಲಿ
ತಂದೆಯು ಅವನೇ ಲೋಕದಲಿ
ಎಲ್ಲವೂ ನಿರ್ವಾಣ ಎಂಬುವರು
ಬಣ್ಣಿಸಲಾಗದು ಎಂಬುವರು
ಎಲ್ಲರ ಮಾತು ಇಂತಾಗಿ
ಏನೋ ಹುರುಳಿದೆ ಇದಕೊಂದು

ದೇವರನ್ನೂ ದೇವತಾರಾಧನೆಯನ್ನೂ ಕುರಿತು ಗೇಲಿ ಮಾಡುವವರ ಬಗೆಗೆ ಅವರಿಗೆ ಕಿಂಚಿತ್ತೂ ಸಮಾಧಾನವಿರಲಿಲ್ಲ. ಇಂತಹ ನಡೆ ತಮಿಳು ಸಂಸ್ಕೃತಿಗೆ ಹೊರತಾದುದು ಎಂದು ಹೇಳಿದ ಅವರು "ಕಾಲಾಂತರದಲ್ಲಿ ಚೇರ, ಚೋಳ, ಪಾಂಡ್ಯ ಮುಂತಾದ ರಾಜರು ಬೆಳೆಸಿ ಉಳಿಸಿಕೊಂಡು ಬಂದಿರುವ ಸಂಸ್ಕೃತಿ ಇದು. ಅನೂಚಾನವಾಗಿ ದೇವರ ಅಸ್ತಿತ್ವದ ಬಗೆಗೆ ನಮ್ಮ ಎಲ್ಲಾ ಸಾಹಿತ್ಯ ಕೃತಿಗಳಲ್ಲಿಯೂ ನಿರಂತರ ಶ್ರದ್ಧೆ, ಪ್ರೋತ್ಸಾಹ ಕಾಣುತ್ತಾ ಬಂದಿದ್ದೇವೆ. ತಮಿಳು ಸಂಸ್ಕೃತಿಯ ಈ ಅಪೂರ್ವ ಸಂಪತ್ತನ್ನು ನಾವು ಅಲ್ಲಗಳೆದರೆ, ತಮಿಳರು ಹೆಮ್ಮೆ ಪಡಲು ಉಳಿಯುವುದಾದರೂ ಏನು? ನಮ್ಮ ಪ್ರಾಚೀನರ ಈ ಕೊಡುಗೆಯನ್ನು ನಾವು ಗೇಲಿ ಮಾಡಿದರೆ ತಮಿಳಗೆ ಮುಂದೇನಾದರೂ ಬೆಳೆಯುವ ಅವಕಾಶವಿದೆಯೆ?" ಎಂದು ಕೇಳುತ್ತಾರೆ. ಮುಂದುವರೆದು ಅವರು ಹೀಗೆನ್ನುತ್ತಾರೆ:

"ದೇವಾಲಯಗಳನ್ನಗಳೆವುದು
ದೇವರ ಪ್ರಾರ್ಥನೆಯನ್ನು ಮಾಡುವವರನ್ನು ನಿಂದಿಸುವುದು
ತಪೋನಿರತರನ್ನು ಕೆಟ್ಟ ಮಾತುಗಳಲ್ಲಿ
ದೂಷಿಸಿ ಜನರ ಮಧ್ಯೆ ಅಸಂತೋಷ ಹರಡುವುದು
ಇಂತಹ ಅನ್ಯಾಯದ ಮಾತುಗಳನ್ನು
ಕ್ರಿಯೆಗಳನ್ನು ಕೂಡಲೆ ನಿಲ್ಲಿಸದಿದ್ದರೆ
ತಮಿಳರ ಜೀವಹಾನಿಯು ಖಂಡಿತ."

## ಗಾಂಧಿ ಮತ್ತು ಗಾಂಧಿವಾದ

ದೇವರ ನಂತರ ಕವಿವರ್ಯರು ಆರಾಧಿಸುವುದು ಗಾಂಧೀಜಿಯವರನ್ನು. ಗಾಂಧೀಜಿಯವರಲ್ಲಿ ಅವರು ತಮಿಳು ಸಂಸ್ಕೃತಿ ಹಾಗೂ ಭಾರತೀಯ ಸಂಸ್ಕೃತಿಯ ಅಂತಸ್ಸಾರವನ್ನು ಕಂಡಿದ್ದಾರೆ. ಅಹಿಂಸೆಯಲ್ಲಿ ಪ್ರಪಂಚದ ಸಕಲ ರೋಗಗಳಿಗೆ ನಿವಾರಣೆಯನ್ನು ಅವರು ಕಂಡಿದ್ದಾರೆ. ಗಾಂಧೀಜಿಯವರ ಬಗೆಗೆ ಹಾಡುವಾಗ ಅವರ ಕವಿಯ ಆತ್ಮ ಅತ್ಯಂತ ಉನ್ನತ ಶಿಖರಕ್ಕೇರಿ ಹಾಡುತ್ತದೆ. ತಮಿಳುನಾಡಿನಲ್ಲಿ ಗಾಂಧೀಜಿಯವರ ತತ್ವಗಳ ಪ್ರಚಾರಕ್ಕಾಗಿ ತಮ್ಮನ್ನೇ ತಾವು ಅರ್ಪಿಸಿಕೊಳ್ಳುವುದಾಗಿ ಹೇಳುತ್ತಾರೆ. ಗಾಂಧೀಜಿಯವರ ಅಹಿಂಸಾ ತತ್ವ ಹಾಗೂ ಸತ್ಯವನ್ನು ವೇಂಗಡ ಪರ್ವತ ಮೊದಲ್ಗೊಂಡು ಕನ್ಯಾಕುಮಾರಿವರೆಗ ಹರಡುವುದು ತಮ್ಮ ಉದ್ದೇಶವೆಂದು ಅವರು ಹೇಳುತ್ತಾರೆ.

ಚಿರವಾಗಲಿ ಕರುಮಂಚದ ಗಾಂಧಿಯ ನಾಮಾಂಕಿತ
ಶಾಂತಿಯು ನೆಲೆಸಲಿ ಲೋಕದಲಿ
ತೊಲಗಲಿ ಜಾತಿ ವರ್ಣ ದ್ವೇಷಗಳು

ಈಡೇರಲಿ ಲೋಕಪಿತನಾ ಮಹದಾಸೆ
ಒಗ್ಗೂಡಲಿ ಮಾನವ ಜನಾಂಗ
ಭಗವಂತನ ನಿರ್ಮಲ ಕ್ರೀಡೆಯಲಿ

ಸತ್ಯ ಮಾರ್ಗದಿ ನಡೆಯೋಣ
ಗಾಂಧಿ ಮಹಾತ್ಮನ ನೆನೆಯೋಣ
ಸತ್ಯವೆ ಅವರದು ಮಂತ್ರ
ಶಾಂತಿಯೆ ಅವರದು ತಂತ್ರ
ಅಂದಿನ ಇಂದಿನ ಸಂತರ
ಪುನರಾವತಾರ ಗಾಂಧಿಯವತಾರ.

ಗಾಂಧೀಜಿಯವರ ಬಗೆಗೆ ಕವಿವರ್ಯರ ಒಲವು ದಿನೇ ದಿನೇ ಅಧಿಕಗೊಂಡಿತು. ತಿರುಕ್ಕುರಳಿನಲ್ಲಿ ಹೇಳಿರುವ ಪ್ರಾಚೀನ ತಮಿಳರ ಧ್ಯೇಯಾದರ್ಶಗಳು ಗಾಂಧೀಜಿಯವರಲ್ಲಿ ಮೂರ್ತೀಭವಿಸುವುದನ್ನು ಅವರು ಕಂಡರು.

ಪ್ರಪಂಚದಾದ್ಯಂತ ನಡೆಯುತ್ತಿರುವ ಅಶಾಂತಿ, ರಕ್ತಪಾತ ಮುಂತಾದ ಅಮಾನುಷ ಕೃತ್ಯಗಳಿಗೆ ಮದ್ದನ್ನು ಅವರು ಗಾಂಧಿವಾದದಲ್ಲಿ ಕಂಡುಕೊಂಡರು.

'ಗಾಂಧಿಯಡಿಗಳ್ ಪೆರುಮೈ' (ಗಾಂಧಿ ಮಹಾತ್ಮರ ಹಿರಿಮೆ) ಎಂಬ ಒಂದು ಪದ್ಯದಲ್ಲಿ ಅವರು ನಿಮ್ಮ ಜನಾಂಗದವರಿಗೆ ಪ್ರೋತ್ಸಾಹ ನೀಡುವ ಮಾತುಗಳಾಡಿದ್ದಾರೆ: ಪೋಲಿಸರ ಹಿಂಸೆಯನ್ನು ಸಹಿಸಲು, ಸೆರೆಮನೆಗೆ ಹೋಗಲು ಸಿದ್ಧವಾಗಿರಿ ಎಂದು ಕರೆನೀಡುತ್ತಾರೆ. ಮಹಿಳೆಯರಿಗೂ ಉತ್ಸಾಹ ತುಂಬುತ್ತಾರೆ. ಶಕ್ತಿಹೀನರಿಗೆ ಚೇತನ ನೀಡಿ, ಪರಕೀಯರ ಆಳ್ವಿಕೆಯನ್ನು ಧಿಕ್ಕರಿಸಲು ಬೀದಿಗಿಳಿಯಿರಿ, ಅಸ್ಪೃಶ್ಯತೆಯನ್ನು ನಮ್ಮ ದೇಶದಿಂದ ಹೊರದೂಡಿರಿ, ಅಹಿಂಸಾ ಪರರಾಗಿರಿ, ಹಿಂಸೆ ಮಾಡಿದವರನ್ನು ಸಹ ದ್ವೇಷಿಸಬೇಡಿರಿ ಎಂದು ಮುಂತಾಗಿ ಬೋಧಿಸಿ ಆತ್ಮಶಕ್ತಿಯು ಎಂತಹ ಸರ್ವೋತ್ತಮ ಶಕ್ತಿಯೆಂಬುದನ್ನು ತೋರಿಸಿದ್ದಾರೆ.

ಗಾಂಧೀಜಿಯವರ ಬಗೆಗೆ ಕವಿವರ್ಯರಿಗೆ ಅತ್ಯಂತ ಹಿತವಾದ ವಿಚಾರವೆಂದರೆ ಅವರು ನುಡಿದಂತೆ ನಡೆಯುತ್ತಿದ್ದುದು.

ನುಡಿವುದು ಸುಲಭ ಎಲ್ಲರಿಗು
ನುಡಿದಂತೆ ನಡೆವರು ಯಾರುಂಟು ?
ಪುಟಗಟ್ಟಲೆ ನೀತಿ ಪಾಠ ಬರೆಯುವುದುಂಟು
ನೀತಿ ಬೋಧನೆ ನಿರಂತರ ಮಾಡುವುದುಂಟು
ಅವೆಲ್ಲವು ಬೇರೆಯವರಿಗೆ ಮಾತ್ರ

ತಮಗನ್ಯಾಯವಿಲ್ಲವೆಂಬುದು ಮಾತ್ರ
ಭಾರತಮಾತೆಯ ಪುತ್ರರಲ್ಲಿ ಅದೆನಿತೋ
ನಾಯಕರಿಹರು, ಸಾರಿ ಹೇಳುವೆ
ನುಡಿದಂತೆ ನಡೆವರು ಅವರಲಿ
ಮೋಹನದಾಸ ಗಾಂಧಿಯವರು ಮಾತ್ರ.

'ಪಡಿಪ್ಪಿನಯ್' (ಪಾಠಗಳು) ಎಂಬ ಶಿರೋನಾಮೆಯ ಮತ್ತೊಂದು ಪದ್ಯದಲ್ಲಿ ಗಾಂಧೀಜಿಯವರ ವಿಶಿಷ್ಟ ಆದರ್ಶಗಳನ್ನು ಕೊಂಡಾಡಿ ಅವುಗಳನ್ನು ಎಲ್ಲರೂ ಅನುಸರಿಸುವಂತೆ ಕೇಳಿಕೊಂಡಿದ್ದಾರೆ. ಬೆಳಗಾಗುವ ಮುನ್ನವೇ ಏಳುವುದು, ಬೆಳಗಿನ ವಾಯು ಸಂಚಾರ, ತಣ್ಣೀರಿನ ಸ್ನಾನ, ಮಿತ ಆಹಾರ, ಯೋಜಿತ ಕಾರ್ಯಕ್ರಮ, ಪತ್ರಗಳಿಗೆ ತಪ್ಪದೆ ಪ್ರತ್ಯುತ್ತರ ಬರೆಯುವುದು, ಸಮಯ ಪಾಲನೆ, ಮಾತಿಗೆ ತಪ್ಪದಿರುವುದು, ಕ್ಷಮೆ, ತಮ್ಮ ತಪ್ಪನ್ನು ಒಪ್ಪಿಕೊಳ್ಳಲು ಸದಾ ಸಿದ್ಧವಾಗಿರುವುದು, ಮಿತ ವ್ಯಯ, ಕಾಯಕದಲ್ಲಿ ಪ್ರೀತಿ, ಮಾನವನಲ್ಲಿ ದೇವರನ್ನು ಕಂಡು ಸೇವೆಗೈಯುವ ಆಸೆ, ಸರ್ವಮತ ಸಹನೆ, ದೇವರ ಹೊರತು ಬೇರಾರಿಗೂ ಮಣಿಯದಿರುವಿಕೆ ಮುಂತಾದ ಗಾಂಧೀಜಿಯವರ ಆದರ್ಶಗಳನ್ನು ಎಲ್ಲರೂ ತಮ್ಮ ಜೀವನದ ಆದರ್ಶಗಳನ್ನಾಗಿ ಮಾಡಿಕೊಳ್ಳಬೇಕೆಂದು ಅವರು ಹೇಳುತ್ತಾರೆ.

'ಗಾಂಧಿ ವಟಿ' (ಗಾಂಧಿ ಮಾರ್ಗ) ಎಂಬ ಒಂದು ಪದ್ಯದಲ್ಲಿ ಕೊಲ್ಲುವುದು ಮಾತ್ರವೇ ಹಿಂಸೆಯಲ್ಲ; ಅಹಿಂಸೆಯೆಂದರೆ ನಿಜವಾದ ಅರ್ಥ ನಮ್ಮ ಮಾತಿನಿಂದ ಪರರಿಗೆ ನೋವುಂಟು ಮಾಡಬಾರದು, ಅಂತೆಯೇ ಬರವಣಿಗೆಯಿಂದ ಮತ್ತು ಕ್ರಿಯೆಯಿಂದ ಎಂಬುದನ್ನು ತೋರಿಸುತ್ತಾರೆ. ಅಹಿಂಸೆಯೆಂದರೆ ಎಲ್ಲರನ್ನೂ ಸಮಾನವಾಗಿ ಪ್ರೀತಿಸುವುದು, ನಮಗೆ ಅಹಿತವನ್ನು ಮಾಡುವವರನ್ನೂ ಸಹ ಒಳ್ಳೆಯ ರೀತಿಯಲ್ಲಿ ನಡೆದುಕೊಳ್ಳುವುದು, ಕೋಪ ರಹಿತರೂ ಅಸೂಯಾ ರಹಿತರೂ ಆಗುವುದು. ಕೆಟ್ಟದ್ದನ್ನು ಎದುರಿಸಲು ಕೆಚ್ಚೆದೆ, ಬಡವರ ಬಗೆಗೆ ಅನುಕಂಪ, ಶಸ್ತ್ರಾಸ್ತ್ರಗಳ ದುಷ್ಪರಿಣಾಮಗಳನ್ನು ಕುರಿತ ವಿವೇಚನೆ, ಸರ್ವಾತ್ಮನ ಚೇತನ ಶಕ್ತಿಯಲ್ಲಿ ಸಂಪೂರ್ಣ ನಂಬಿಕೆ ಮುಂತಾದವು ಅಹಿಂಸಾ ಮಾರ್ಗದ ಮುಖ್ಯಾಂಶಗಳು.

'ಯಂಗ್ ಇಂಡಿಯಾ'ದಲ್ಲಿ ಪ್ರಕಟವಾಗಿದ್ದ ಗಾಂಧೀಜಿಯವರ ಅಹಿಂಸೆ ಕುರಿತ ಒಂದು ಲೇಖನದ ಸಾರಾಂಶವನ್ನು ಅವರು ಪದ್ಯರೂಪದಲ್ಲಿ ಹೇಳಿದ್ದಾರೆ,

ಈಟಿ ನನ್ನೊಂದು ಅಳ್ಳೆಯನು ತಿವಿಯಲಿ
ಮತ್ತೊಂದು ಅಳ್ಳೆಗೆ ಕೊಡಲಿ ತೂರಲಿ
ಲಾಠಿ ಏಟುಗಳು ರಕ್ತವುಕ್ಕಿಸಿ
ದಿಕ್ಕು ದಿಕ್ಕಿಗೂ ಚೆಲ್ಲಲಿ

ವಾಚಾಮಗೋಚರ ಶಪಿಸಿ ಹೀಯಾಳಿಸಲಿ
ಅಹಿಂಸಾ ಮಾರ್ಗವು ಸರಿಯೆಂದು ಮುಂಗುಳ್ಳಗೆ ಸ್ವತಂತ್ರ
ನನ್ನನು ಇಹಲೋಕದಿಂದ ಪಾರುಮಾಡೆನ್ನುವುದು
ಸದಾ ನನ್ನ ಬಯಕೆ.

ಮಹಾತ್ಮರ ಅಂತರಾತ್ಮದ ಆಸೆ ಹೇಗೆ ಸಂತರ ವಾಣಿಯಂತೆ ಮೊದಲೆ ವ್ಯಕ್ತವಾಗಿದೆಯೆಂಬ ವಿಚಾರ, ಗೋಡ್ಸೆಯು ಗುಂಡೇಟಿನಿಂದ ಹತರಾದಾಗ ಹೇಗೆ ಅವರ ಬಾಯಲ್ಲಿ ರಾಮನಾಮ ಹೊರಬಂತು-ಈ ಎಲ್ಲಾ ವಿಚಾರಗಳನ್ನು ಇದು ಸ್ಪಷ್ಟಪಡಿಸುತ್ತದೆ.

ಗಾಂಧೀಜಿಯವರು ಹುತಾತ್ಮರಾದ ಸುದ್ದಿ ತಿಳಿದ ನಮ್ಮ ಕವಿವರ್ಯರು ಕೆಲವು ದಿನಗಳು ಅನ್ನಾಹಾರ ನಿದ್ರೆ ತೊರೆದು ಪರಿತಪಿಸಿದರು, ಪ್ರಜ್ಞಾಹೀನರಾದರು. ಪ್ರಜ್ಞಾವಸ್ಥೆಗೆ ಬಂದನಂತರ ಗಾಂಧೀಜಿಯವರಿಗೆ ಶ್ರದ್ಧಾಂಜಲಿಯನ್ನು ಸಲ್ಲಿಸಿದರು. ಇದು 'ಗಾಂಧಿ ಅಂಜಲಿ' ಎಂಬ ಹೆಸರಿನಲ್ಲಿ ಪ್ರಕಟವಾಗಿದೆ. ಕಗ್ಗತ್ತಲೆ ಆವರಿಸಿದ್ದಾಗ ಬೆಳಕು ತೋರಿದ ದೀಪ ನಂದಿಹೋಯಿತು. ಸತ್ಯ ಅಹಿಂಸೆಯ ಗೆಲುವನ್ನು ಸದಾ ಸಾರಿ ಹೇಳುತ್ತಿದ್ದ ಕಿರು ಕಹಳೆಯು ತನ್ನ ಸದ್ದನ್ನು ನಿಲ್ಲಿಸಿತು. ಭಾರತೀಯರು ತಮ್ಮೆಲ್ಲ ಮತೀಯ, ಜಾತೀಯ ಹಾಗೂ ಭಾಷಿಕ ಸಂಕುಚಿತ ಮನೋಭಾವನೆಗಳನ್ನು ತೊರೆದು ಹೊರಬರಬೇಕಾಗಿದೆ. ಏಕೆಂದರೆ ಗಾಂಧೀಜಿಯವರು ಬದುಕಿದ್ದು ಇದಕ್ಕಾಗಿಯೆ ಎಂದು ಕರೆಕೊಟ್ಟಿದ್ದಾರೆ. ಮತ್ತೊಂದು ಕವನದಲ್ಲಿ ಅವರು ಹೇಳುತ್ತಾರೆ– ಗಾಂಧೀಜಿಯವರ ಸಂಸ್ಮರಣೆಯೆಂದರೆ ಅವರ ಪ್ರತಿಮೆಗಳನ್ನು ಸ್ಥಾಪಿಸುವುದಲ್ಲ, ಅವರ ಆದರ್ಶಗಳನ್ನು ಪಾಲಿಸುವುದು.

ಗಾಂಧೀಜಿಯವರಿಗೆ ಪ್ರಿಯವೆನಿಸಿದ್ದ ಖಾದಿ, ಗುಡಿ ಕೈಗಾರಿಕೆ, ಪಾನನಿರೋಧ, ಅಸ್ಪೃಶ್ಯತಾ ನಿವಾರಣೆ, ಪಂಚಾಯತ್ ರಾಜ್ ಮುಂತಾದ ಕಾರ್ಯಕ್ರಮಗಳನ್ನು ಕುರಿತು ಅವರು ಕವನಗಳನ್ನು ರಚಿಸಿದ್ದಾರೆ. ಖಾದಿಯ ಮಹತ್ವವನ್ನು ಕುರಿತು ಇವರು ರಚಿಸಿದ ಹಾಡನ್ನು ಮಹಿಳೆಯರು ಮನೆಮನೆಗೆ ಹೋಗಿ ಹಾಡಿ ಖಾದಿಯನ್ನು ಮಾರಾಟ ಮಾಡಿದ್ದಾರೆ. ಸ್ವಯಂಸೇವಕರು ಪಾನನಿರೋಧವನ್ನು ಕುರಿತ ಇವರ ಹಾಡುಗಳನ್ನು ಹಾಡಿ ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್ ನಡೆಸಿದ್ದಾರೆ.

'ಕೈತ್ತೊಳಿಲ್' (ಗುಡಿ ಕೈಗಾರಿಕೆ) ಎಂಬ ಕವನವೊಂದರಲ್ಲಿ ಕೈಗಾರಿಕೆಗಳಿಂದ ಹೆಚ್ಚುವಿಕೆಯಿಂದ ನಾಡಿನಲ್ಲಿ ಹೇಗೆ ಒಂದು ಕಡೆ ನಿರುದ್ಯೋಗವೂ ಪರನಾಡಿನಲ್ಲಿ ಸಾಮ್ರಾಜ್ಯಶಾಹಿಯೂ ಬೆಳೆಯುತ್ತದೆ ಎಂಬುದನ್ನು ಎತ್ತಿ ತೋರಿಸಿದ್ದಾರೆ. ಅದೇ ಸಮಯದಲ್ಲಿ ಕೈಗಾರಿಕೆಗಳನ್ನು ಸಂಪೂರ್ಣವಾಗಿ ಕಿತ್ತೊಗೆಯಿರಿ ಎಂದು ಅವರು ಹೇಳುವುದಿಲ್ಲ. ಮೂಲಭೂತ ಅವಶ್ಯಕತೆಗಳಿಗೆ ಬೇಕಾದ ಆಹಾರ, ಬಟ್ಟೆ ಮುಂತಾದವುಗಳಾದರೂ ಗುಡಿ ಕೈಗಾರಿಕೆಯನ್ನು ಅವಲಂಬಿಸಲಿ ಎಂದು ಹೇಳುತ್ತಾರೆ.

## ದೇಶಪ್ರೇಮ

ಗಾಂಧೀಜಿಯವರಲ್ಲಿ ಕವಿವರ್ಯರಿಗೆ ಅಪಾರ ಭಕ್ತಿ. ಅನಂತರ ಅವರ ಮನಸ್ಸನ್ನು ಆಕರ್ಷಿಸಿದ್ದು ಮಾತೃಭೂಮಿ. ನಮಗೆ ನಮ್ಮದೇ ಆದ ಸ್ವತಂತ್ರ ಸರ್ಕಾರ ಅಗತ್ಯ ವೆಂದೂ, ಅದನ್ನು ಪಡೆಯಬೇಕೆಂದು ಸಂದೇಶ ನೀಡುವ ಹಲವಾರು ಕವನಗಳನ್ನು ಅವರು ಸ್ವಾತಂತ್ರ್ಯಪೂರ್ವದಲ್ಲಿ ರಚಿಸಿ ಜನರಿಗೆ ಉತ್ತೇಜನ ನೀಡಿದ್ದಾರೆ. ನಾಡನ್ನು ಕುರಿತು ಹೆಮ್ಮೆಯಿಂದ ಅವರು ಹಾಡುತ್ತಾರೆ :

> ಭಾರತವು ನನ್ನ ಸಂಪತ್ತು
> ತಲೆತಲಾಂತರದಿಂದ ಬಂದ ಸ್ವತ್ತು
> ಅದಕೇಕೆ ಈಗ ವೃಥಾ ಪಂಚಾಯತು ?
> ಯಾರಿದು ನಮ್ಮನಾಳುವ ಪರಕೀಯ ?
> ಗುಲಾಮತನದ ದಿನಗಳು ಕಳೆದಾಯ್ತು
> ಬಂದು ಹೋಗುವವರ ಕಾಲ ಮುಗಿಯಿತು
> ಕೋಪತಾಪದ ವೀರ ಶೌರ್ಯದ ಮಾತಂಗಳು ವ್ಯರ್ಥವೆ ?
> ಬಿಡುಗಡೆಯಾಸೆ ಕುಂದೀತೆ ?

'ಭಾರತಮಾತೆಯ ವೇದನೆ' ಎಂಬ ಹೆಸರಿನ ಒಂದು ಕವನದಲ್ಲಿ ಅವರು ಬ್ರಿಟಿಷರ ಆಡಳಿತವನ್ನು ಒಬ್ಬ ಬಿಳಿಯ ಹೆಂಗಸಿಗೆ ಹೋಲಿಸಿ ಹೇಳಿದ್ದಾರೆ–ಭಾರತಮಾತೆಯ ಕರುಣೆಯಲ್ಲಿ ಆಶ್ರಯ ಪಡೆದ ಅವಳು ಆಶ್ರಯ ನೀಡಿದ ಭಾರತಮಾತೆಗೆ ಎರಡು ಬಗೆದಿದ್ದಾಳೆ. ಮಕ್ಕಳಿಗೆ ತಾಯಿಯನ್ನೇ ಉದಾಸೀನ ಮಾಡುವಂತೆ ಮಾಡಿದ್ದಾಳೆ, ತಮ್ಮ ಸಂಸ್ಕೃತಿಯನ್ನು ತೊರೆದು ವಿದೇಶದ ಸಂಸ್ಕೃತಿಯ ಕಡೆ ಅವರ ಒಲವನ್ನು ತಿರುಗಿಸುತ್ತಿದ್ದಾಳೆ. ಇದರಿಂದ ಭಾರತಮಾತೆಯು ದುಃಖಿತಳಾಗಿದ್ದಾಳೆ. ತನ್ನ ಮಕ್ಕಳೇ ತನ್ನನ್ನು ದ್ವೇಷಿಸಿ ಬಿಳಿ ಹೆಂಗಸಿನ ದಾಸರಾಗಿದ್ದಾರೆ, ಅವಳನ್ನು ಮನೆಬಿಟ್ಟು ತೊಲಗಿಸಿ ಮಕ್ಕಳು ಭ್ರಷ್ಟರಾಗದಂತೆ ತಡೆಯಿರಿ ಎಂದು ಮೊರೆಯಿಡುತ್ತಿದ್ದಾಳೆ.

ಸ್ವಾತಂತ್ರ್ಯದ ಮಹತ್ವವನ್ನು ಅನೇಕ ಪದ್ಯಗಳಲ್ಲಿ ವಿವರಿಸಿರುವ ಅವರು ಗಾಂಧೀ ಮಾರ್ಗವನ್ನು ಅನುಸರಿಸಲು ಪಣತೊಡುವಂತೆ ಯುವಕರಿಗೆ ಕರೆಕೊಟ್ಟಿದ್ದಾರೆ. "ಸಣ್ಣ ಇರುವೆ, ಜೇನ್ನೊಣ ಮುಂತಾದವು ಸಹ ಸ್ವಾತಂತ್ರ್ಯ ಪಡೆಯಲು ಹಲುಬುವಾಗ, ಪ್ರೌಢ ಮನುಷ್ಯನು ಅದು ಹೇಗೆ ಗುಲಾಮಗಿರಿ ಜೀವನವನ್ನು ಬಯಸುತ್ತಾನೆ ?" ಎಂದು ಪ್ರಶ್ನಿಸಿ ಹುರಿದುಂಬಿಸುತ್ತಾರೆ. ಗುಲಾಮತನದ ಸುಖಜೀವನವನ್ನು ಉಪ್ಪಿಲ್ಲದ ಊಟಕ್ಕೆ, ಆತಿಥ್ಯವಿಲ್ಲದ ಹಬ್ಬದೌತಣಕ್ಕೆ, ಪ್ರೀತಿಯಿಲ್ಲದ ಸುಂದರ ಹೆಂಡತಿಗೆ ಅವರು ಹೋಲಿಸಿದ್ದಾರೆ. ಅಲ್ಲದೆ ಸ್ವಾತಂತ್ರ್ಯ ರಕ್ಷಣೆಗಾಗಿ ಗಾಂಧಿಮಾರ್ಗ ಅರಿದರೆ ಅಹಿಂಸಾ

ಮಾರ್ಗವನ್ನು ಅನುಸರಿಸುವಂತೆಯೂ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳು ವಂತೆಯೂ ಜನತೆಗೆ ತಮ್ಮ ಜವಾಬ್ದಾರಿಯ ಬಗೆಗೆ ಅವರು ಎಚ್ಚರಿಕೆ ನೀಡಿದ್ದಾರೆ.

ಜನತೆಯ ಹೃದಯದಲ್ಲಿ ದೇಶಪ್ರೇಮ ಮೂಡಿಸಲು ಅವರು ರಾಷ್ಟ್ರಧ್ವಜ ಹಾಗೂ ರಾಷ್ಟ್ರಗೀತೆಯನ್ನು ಕುರಿತು ಹಾಡಿದ್ದಾರೆ. ಅವರ ಪ್ರಕಾರ ರಾಷ್ಟ್ರಧ್ವಜವು ಪ್ರತಿಯೊಬ್ಬ ಪ್ರಜೆಗೂ ದೇವರ ಸಮಾನ.

ಗರತಿಗೆ ತನ್ನ ಗಂಡನೆ ಪರಮ ದೇವರು
ಕಲಿತವನಿಗೆ ತಾನಾಡುವ ಮಾತು ದೇವರು
ವೀರರಿಗೆ ಯುದ್ಧಗೌರವವು ದೇವರು
ದೇಶದ ಘನತೆ ಕಾಪಾಡಲು ನಮಗೆ
ದೇಶದ ರಾಷ್ಟ್ರಧ್ವಜವೆ ದೇವರು.

## ರಾಷ್ಟ್ರನಾಯಕರು ಮತ್ತು ಹಬ್ಬಗಳು

ಮಾತೃಭೂಮಿ ಹಾಗೂ ಗಾಂಧೀಜಿಯವರನ್ನು ಕೊಂಡಾಡಿ ಬರೆದಿರುವ ಕವಿ ವರ್ಯರು ಕೆಲವು ರಾಷ್ಟ್ರೀಯ ನಾಯಕರನ್ನು ಕುರಿತು ಪದ್ಯಗಳನ್ನು ಬರೆದಿದ್ದಾರೆ. ತಿಲಕ್, ಗೋಖಲೆ, ದಾದಾಬಾಯಿ ನವರೋಜಿ, ಪಟೇಲ್, ಟಾಗೂರ್, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ವಿ.ಓ. ಚಿದಂಬರಮ್ ಪಿಳ್ಳೈ, ತಿರು. ವಿ. ಕಲ್ಯಾಣ ಸುಂದರಮ್, ಸತ್ಯಮೂರ್ತಿ, ಭಾರತಿಯಾರ್, ರಾಜಾಜಿ ಮತ್ತು ಕಾಮರಾಜ್ ಮುಂತಾದ ನಾಯಕರನ್ನು ಕುರಿತು ಬರೆದಿದ್ದಾರೆ. ಅವರ ಪದ್ಯಗಳು ಅತ್ಯಂತ ನಿಷ್ಕೃಷ್ಟವಾದ ಶೀಲ ಸ್ವಭಾವಗಳ ವರ್ಣನೆಗೆ ಹೆಸರು ಪಡೆದಿವೆ. ಆಯಾ ವ್ಯಕ್ತಿಯ ನಿಜವಾದ ವ್ಯಕ್ತಿತ್ವವನ್ನು ಸ್ವರೂಪವನ್ನು ಅವು ನಮ್ಮ ಮುಂದೆ ತೆರೆದು ತೋರಿಸುತ್ತವೆ. ಸ್ವತಃ ಕಲಾವಿದರೂ ಆಗಿದ್ದ ಅವರ ಲೇಖನಿಯಲ್ಲಿ ವ್ಯಕ್ತಿ ಸ್ವರೂಪದ ಚಿತ್ರ ಚೆನ್ನಾಗಿ ಒಡಮೂಡಿ ಬಂದಿದೆ. ವಿ.ಓ. ಚಿದಂಬರಮ್ ಪಿಳ್ಳೈಯವರನ್ನು ಅವರು ವರ್ಣಿಸುವುದು ಹೀಗೆ :

ಕಳಂಕರಹಿತ ಕಲಕಲವೆಂಬ ಮಾತು ಕೇಳುವುದು ;
ಕಪ್ಪಾದರೂ ಹಸನ್ಮುಖಿಗಲಿ ಕರುಣೆ ತೋರುವುದು ;
ಕುಳ್ಳಿರಬಹುದಾದರೂ ದುಂಡಾದ ಕಲ್ಲಿನಲಿ ಕೆತ್ತಿದ ದಪ್ಪನೆಯ ಮೂರ್ತಿ
ನಿಮ್ಮನು ಕೂಗಿ ಹಾರೈಸುತ್ತದೆ ಜೋಡಿಸಿದ ಕೈಗಳಲಿ
ಅಚ್ಚಬಿಳುಪಿನ ಅವರ ಉಡುಗೆ
ವೇದಾಂತ ಸಿದ್ಧಾಂತಗಳ ಪ್ರಕಾಶ ಬೀರುವುದು ;
ಸೆರೆವಾಸದ ಅನುಭವದ ಗುಳಿಗಳು ಮೈಯೆಲ್ಲಾ
ಕಾಣುವುದು ಚಿದಂಬರಮ್ ಅವರನು ನೆನೆದಾಗ.

ಸ್ವಾಮಿ ವಿವೇಕಾನಂದರನ್ನು ವರ್ಣಿಸುವಾಗ ಅವರು ಹೇಳುವ ಮಾತುಗಳು: ಕಲಿತನದ ಪ್ರತಿರೂಪ, ಮನ್ಮಥನ ರೂಪ, ಆದರೇನು ಮನ್ಮಥನನ್ನು ಜಯಿಸಿದವನಷ್ಟೇ ಚಂದ್ರನಂತಹ ಶಾಂತ; ನಾಡಿನ ಸೇವೆ ಮಾಡುವಾಗ ಸೂರ್ಯನಷ್ಟು ಬಿಸಿ. ಅದು ದೇವರ ಪೂಜೆ.

ಕವಿ ಭಾರತಿಯಾರರ ಭಾವೋದ್ರಿಕ್ತ ಗೀತೆಗಳನ್ನು ಕುರಿತು ಹೇಳುತ್ತಾರೆ: ಭಾರತಿಯಾರರ ಗೀತೆಯನ್ನು ಕೇಳಿದ ಯಾರೇ ಆಗಲಿ, ಅವಿದ್ಯಾವಂತನೇ ಆಗಿರಲಿ ಕೂಡಲೆ ತನ್ನ ತೋಳಿನ ಪಟ್ಟಿಯನ್ನು ಸರಿಸಿ, ಬಿಗಿಮುಷ್ಟಿ ಹಿಡಿದು ಕೋಪೋದ್ರೇಕದಿಂದ ಘೋಷಿಸುತ್ತಾನೆ: "ಈ ಕೂಡಲೆ ಗುಲಾಮ ಜೀವನವನ್ನು ಕಡೆಗಾಣಿಸಬೇಕು." ಇನ್ನು ಅವರ ಹಾಡುಗಳನ್ನು ಕುರಿತು ಹೆಚ್ಚು ಹೇಳುವುದೇನು ಎನ್ನುತ್ತಾರೆ.

ರಾಜಾಜಿಯವರನ್ನು ಕುರಿತು ಅವರು ಹೇಳುತ್ತಾರೆ. ಅವರು ಮಹಾಮೇಧಾವಿ. ಜಾತಿ ಮತಗಳ ಬಂಧನವನ್ನು ದಾಟಿ ಸಹನೆ, ತಾಳ್ಮೆಯು ಮೇಳೈಸಿರುವ ಮೂರ್ತಿ. ಪ್ರಾಮಾಣಿಕತೆ, ಕಂಡದ್ದನ್ನು ಕಂಡ ಹಾಗೆ ಹೇಳುವ ಸ್ವಭಾವ; ಯಾರು ಇಷ್ಟಪಡಲಿ ಪಡದಿರಲಿ ಸತ್ಯವನ್ನು ಮರೆಮಾಚದವರು. ಕಳಂಕರಹಿತ ಜೀವನ, ಸೇವೆಯಲ್ಲಿ ಎಪ್ಪತ್ತನೆಯ ವಯಸ್ಸಿನಲ್ಲಿಯೂ ಇಪ್ಪತ್ತು ವಯಸ್ಸಿನ ಯುವಕನ ಸಪ್ರೋತ್ಸಾಹ, ನಿಜವಾದ ಗಾಂಧಿವಾದಿ.

ರಾಷ್ಟ್ರೀಯ ಉತ್ಸವಗಳ, ಹಬ್ಬಗಳ ಬಗೆಗೂ ಅವರು ಕೆಲವು ಪದ್ಯಗಳನ್ನು ಬರೆದಿದ್ದಾರೆ. ಭಾರತ ಗಣರಾಜ್ಯ ದಿನೋತ್ಸವ, ನೆಹರೂ, ಪಟೇಲ್ ಮುಂತಾದವರ ಹುಟ್ಟುಹಬ್ಬಗಳು, ದೀಪಾವಳಿ ಮುಂತಾದ ರಾಷ್ಟ್ರೀಯ ಹಬ್ಬಗಳು, ಪೊಂಗಲ್‌ನಂತಹ ಪ್ರಾದೇಶಿಕ ಹಬ್ಬಗಳ ಮಹತ್ವವನ್ನು ಕುರಿತು ಅವರು ಹಾಡಿದ್ದಾರೆ. ವಿವಿಧ ವರ್ಗಗಳ ಮಧ್ಯೆ ಮಧುರ ಬಾಂಧವ್ಯ, ಪರಿಶ್ರಮ, ಪಾರಮಾರ್ಥಿಕ ಏಳಿಗೆ ಹಾಗೂ ಪ್ರಪಂಚದಾದ್ಯಂತ ಶಾಂತಿಯ ಸಂದೇಶವನ್ನು ಅವರು ನೀಡಿದ್ದಾರೆ. ಅವರ ಬಹುತೇಕ ಕವನಗಳು ಸ್ವಚ್ಛಜೀವನ ಹಾಗೂ ಆರೋಗ್ಯಕರ ಬಾಳ್ವೆಯನ್ನು ಒತ್ತಿಹೇಳುವ ಬರಹಗಳಾಗಿವೆ. ಈಗಾಗಲೇ ಹೇಳಿರುವ ಹಾಗೆ ಅವರ ಪ್ರಾರಂಭದ ರಚನೆಗಳು ಬಹುಮಟ್ಟಿಗೆ ದೇಹಾರೋಗ್ಯವನ್ನು ಕುರಿತ ಪಾಠಗಳಾಗಿವೆ. ಆರೋಗ್ಯ ಸಪ್ತಾಹ ದಿನಾಚರಣೆಗಳಲ್ಲಿ ಮಕ್ಕಳು, ಸ್ತ್ರೀಯರು ಅವುಗಳನ್ನು ಹಾಡುತ್ತಿದ್ದರು. ದೈನಂದಿನ ಸ್ನಾನ, ಸರಳ ಆಹಾರ ಹಾಗೂ ಇತರೆ ಆರೋಗ್ಯಕರವಾದ ಅಭ್ಯಾಸಗಳನ್ನು ಕುರಿತು ಅವುಗಳಲ್ಲಿ ಪ್ರಸ್ತಾಪಿಸಲಾಗಿದೆ. ಆರೋಗ್ಯದ ಕಟ್ಟುಪಾಡುಗಳನ್ನು ಮೀರಿ ನಂತರದ ಪರಿಣಾಮಕ್ಕೆ ವಿಧಿಯನ್ನು ದೂರುವವರನ್ನು ಕಂಡರೆ ಅವರು ಸಿಡಿಮಿಡಿಗೊಳ್ಳುತ್ತಾರೆ.

## ತಮಿಳು ಮತ್ತು ಅದರ ಸಂಸ್ಕೃತಿಗೆ ನಿಷ್ಠೆ

ತಾಯ್ನುಡಿಗೆ ಹಾಗೂ ಸಂಸ್ಕೃತಿಗೆ ಸಹಜವಾಗಿ ತೋರಿಸಬೇಕಾದ ಒಲವು ಅವರ

ಕವನಗಳಲ್ಲಿ ಅಭಿವ್ಯಕ್ತವಾಗಿದೆ. ಅತ್ಯಂತ ಕಪ್ಪಗಿರುವ ಕಾಗೆಯೂ ಸಹ ತನ್ನ ಮರಿಯನ್ನು ಚಿನ್ನದ ಬಣ್ಣವೆಂದು ಪರಿಗಣಿಸುತ್ತದೆ. ಅಂತೆಯೇ ಪ್ರತಿಯೊಬ್ಬರಿಗೂ ಅವರವರ ಮಾತೃಭಾಷೆ ಸರ್ವೋತ್ಕೃಷ್ಟವಾದುದು. ಆದ್ದರಿಂದ ಪ್ರತಿಯೊಬ್ಬ ತಮಿಳನು ತನ್ನ ಭಾಷೆಯ ಪ್ರಾಚೀನತೆ ಹಾಗೂ ಸಾಹಿತ್ಯದ ಮಹತ್ವದ ಬಗೆಗೆ ಹೆಮ್ಮೆ ಪಡಬೇಕು. ಇದೇ ಸಂದರ್ಭದಲ್ಲಿ ಅವರು ಹೇಳುತ್ತಾರೆ: ಸಂಕುಚಿತ ಮನೋಭಾವಗಳಿಗೆ ಆಸ್ಪದ ಬೇಡಿ ಎಂದು. ಆರೋಗ್ಯಕರವಾದ ಪ್ರಾಂತೀಯತೆಯು ರಾಷ್ಟ್ರವಿರೋಧವಲ್ಲವೆಂದು ಅವರು ವಾದಿಸುತ್ತಾರೆ. ತನ್ನ ತಾಯಿಯ ಬಗೆಗೆ ತೋರುವ ಅತಿ ಮಮತೆ ಇತರ ಹೆಂಗಸರನ್ನು ದ್ವೇಷಿಸಿದಂತಾಗುವುದಿಲ್ಲ ಎಂಬುದನ್ನು ಅವರು ಒತ್ತಿ ಹೇಳುತ್ತಾರೆ.

ತಮಿಳು ಭಾಷೆಯ ಸಂಸ್ಕೃತಿಯ ವೈಶಿಷ್ಟ್ಯವನ್ನು ಅವರು ಅನೇಕಬಾರಿ ಹೆಮ್ಮೆಯಿಂದ ಹಾಡುತ್ತಾರೆ:

> ತಮಿಳನ್ ಎಂಬೊಂದು ಕುಲವುಂಟು
> ಅವನ ಗುಣವದು ಬೇರೊಂದು
> ಅವನ ನುಡಿಯದು ಅಮೃತವು
> ಒಲವಿನ ನಡೆಯು ಅವನ ಗುರಿ

ಕವಿವರ್ಯರು ಇಲ್ಲಿ 'ಕುಲ' ಎಂಬ ಪದವನ್ನು ಜಾತಿವರ್ಗಕ್ಕೆ ಸೇರಿದವರೆಂಬ ಅರ್ಥದಲ್ಲಿ ಬಳಸುವುದಿಲ್ಲ. ವಿಶಾಲವಾದ ಸಾಂಸ್ಕೃತಿಕ ಅರ್ಥದಲ್ಲಿ ಅಖಂಡ ಭಾರತೀಯರಲ್ಲಿರುವ ಒಂದು ಗುಂಪು ಎಂದು ಅರ್ಥೈಸಿದ್ದಾರೆ. ತಮಿಳು ಭಾಷೆಯನ್ನು ಅವರು 'ಅಮೃತ' ಎಂದು ಕರೆದಿದ್ದಾರೆ; ಆ ಪದಕ್ಕೆ 'ಮಾಧುರ್ಯ' 'ಸಿಹಿ' ಮುಂತಾದ ಅರ್ಥಗಳಿವೆ. ಅಮರತ್ವವು ಇದರ ವೈಶಿಷ್ಟ್ಯ. ಅಮೃತವು ನಿರಂತರ ಯೌವನವನ್ನು ಪಡೆಯುವ ಗುಣವನ್ನು ಹೊಂದಿರುವುದರಿಂದ ತಮಿಳನ್ನು ಅಮೃತ ಎಂದು ಕರೆಯಲಾಗಿದೆ. ಅಲ್ಲದೆ ತಮಿಳ್ ಎಂಬ ಪದವು 'ಅಮಿಳ್ತಂ' (ಅಮೃತ) ಎಂಬ ಪದದಿಂದ ಜನಿಸಿದೆ ಎಂದು ಅವರು ಅನುಮಾನಿಸುತ್ತಾ ಹೇಳುತ್ತಾರೆ. ಏಕೆಂದರೆ ಆ ಪದವನ್ನು ಪದೇಪದೇ ಜೋರಾಗಿ ಉಚ್ಚರಿಸಿದಾಗ 'ತಮಿಳ್' ಎಂಬ ಪದ ತಾನಾಗಿಯೇ ಹುಟ್ಟುತ್ತದೆ. ತಮಿಳರನ್ನು ಅವರ ಪ್ರಾಚೀನ ಸಾಹಿತ್ಯದ ಮಹತ್ವದ ಕಡೆ ತಿರುಗಿ ನೋಡುವಂತೆ ಎಚ್ಚರಿಸುತ್ತಾರೆ. ಶಿಲಪ್ಪದಿಕಾರಮ್, ಕಂಬರಾಮಾಯಣ, ಚಿಂತಾಮಣಿ, ಮಣಿಮೇಖಲೈ, ತಿರುವಾಚಕಮ್ ಹಾಗೂ ತೇವಾರಮ್ ಮುಂತಾದ ಭಕ್ತಿಸಾಹಿತ್ಯ, ಶಿಲ್ಪ, ಸೌಂದರ್ಯ, ಸಂಗೀತ, ವಾದ್ಯ ಮುಂತಾದ ವೈಶಿಷ್ಟ್ಯಗಳನ್ನು ಕುರಿತು ಹೇಳುತ್ತಾರೆ. ತಮಿಳರ ಆದರ್ಶದ ಬಗೆಗೆ ಅವರು ಹೇಳುವುದು ಹೀಗೆ:

> ಮಾನವು ಹಿರಿದು ಪ್ರಾಣಕೆ ಸಮವು
> ಪರೋಪಕಾರವು ಪರಮಗುರಿ

ದಾನವು ಪಡೆವಲಿ ಹಿಂತೆಗೆವವಗೆ
ಕೊಡುವುದು ಮಾತ್ರವೆ ಪ್ರಧಾನವು

ವಳ್ಳುವರ ಕಾಲದಿಂದಲೂ ಅಹಿಂಸೆ, ಸತ್ಯ ಮುಂತಾದ ಆದರ್ಶಗಳು ತಮಿಳರ ಸಾಮಾಜಿಕ ನೀತಿಯು ನೆಲೆಗಟ್ಟಾಗಿ ನಡೆದುಕೊಂಡು ಬಂದಿದೆ ಎಂಬುದನ್ನು ಅವರು ಬೊಟ್ಟುಮಾಡಿ ತೋರಿಸುತ್ತಾರೆ. ವೃತ್ತಿಯಿಂದ ತಮಿಳರು ಸಮಾನರಿಲ್ಲದಿರಬಹುದು, ಆದರೆ ಪ್ರವೃತ್ತಿಯಿಂದ ಎಲ್ಲರಲ್ಲಿಯೂ ಸಮಾನತೆಯನ್ನು ಕಂಡು ವಿದೇಶೀಯರಿಗೂ ಸಹ ನ್ಯಾಯವಂಚನೆ ಮಾಡುವುದಿಲ್ಲ. 'ಇಳಮ್ ತಮಿಳನುಕ್ಕು' (ಯುವ ತಮಿಳನಿಗೆ) ಎಂಬ ಗೀತೆಯಲ್ಲಿ ಅವರು ಹೀಗೆ ಹೇಳುತ್ತಾರೆ :

ತಮಿಳನೆಂಬ ಹೆಮ್ಮೆಯಿಂದ
ತಲೆಯೆತ್ತಿ ನಿಲ್ಲು !
ತಮಿಳಮೃತದ ಕಂಪು ಸ್ವರ್ಗದತ್ತ ಹಾಯಲಿ
ಲೋಕಕೆಲ್ಲ ಹಬ್ಬಲಿ ನಾಡಿಗೆಲ್ಲ ಹರಿದು ಬರಲಿ
ತಮಿಳುನೊಲವು ತಮಿಳು ಕಂಪಿಸಲಿ
ಹರಿದು ಬರಲಿ
ಎಲ್ಲ ಕಲೆಗಳು ಅನ್ಯನಾಡುಗಳು
ಬಂದು ಬೀಳಲಿ ತಮಿಳರ ಹೊಸ್ತಿಲಲಿ.

ಇಹಲೋಕದ ಸುಖಾನುಭವ ಪರಲೋಕದ ಸಂತೋಷಕ್ಕೆ ಮಾರ್ಗದರ್ಶಿ ಎಂಬ ತಮಿಳರ ಆದರ್ಶವನ್ನು ಅವರು ಎತ್ತಿಹಿಡಿದು ಬಹುಶಃ ಇದು ವೈಚಾರಿಕತೆಗೆ ತಮಿಳು ನಾಡಿನ ಒಂದು ವಿಶಿಷ್ಟ ಕೊಡುಗೆ ಎಂದು ಅವರು ಹೇಳುತ್ತಾರೆ. ವಿಶಾಲ ಹೃದಯ ಮತ್ತು ಪರಮತ ಸಹಿಷ್ಣುತೆ ಕವಿವರ್ಯರು ಪದೇಪದೇ ಹೇಳುವ ತಮಿಳರ ವಿಶಿಷ್ಟ ಗುಣಗಳು. ತಮಿಳುನಾಡನ್ನು ಅವರು ವರ್ಣಿಸುವ ರೀತಿ ಹೀಗೆ :

"ಅನೇಕತೆಯಲ್ಲಿ ಏಕತ್ವವನ್ನು ಕಾಣುವುದು ತಮಿಳು
ನಾಡಿಗೆ ಮೊದಲಿನಿಂದಲೂ ಒಂದು ವರಪ್ರಸಾದವಾಗಿ
ಬಂದಿರುವ ಗುಣ. ತಮಿಳರು ಯಾವುದೇ ಮತವನ್ನು
ತಮ್ಮದೇ ಮತವೆಂದು ಒಪ್ಪಿಕೊಂಡು ಆಶ್ರಯ ನೀಡುವುದು
ತಮಿಳರ ಒಂದು ಉದಾರ ಗುಣ."

ಮಣ್ಣಿನ ಮಕ್ಕಳ ವಾದಕ್ಕೆ ಅವರು ಬೆಂಬಲ ನೀಡುವುದಿಲ್ಲ. ತಮಿಳು ಭಾಷೆಯು ಬೇರೆ ಭಾಷೆಗಳಿಂದ ಯಾವುದೇ ಪದಗಳನ್ನು ಸ್ವೀಕರಿಸಬಾರದೆಂಬ ಪರಿಶುದ್ಧತೆಯನ್ನು

ಕಾಪಾಡಿಕೊಳ್ಳಬೇಕೆಂಬ ಮಡಿವಂತಿಕೆಯ ವಾದವನ್ನು ಅವರು ಒಪ್ಪುವುದಿಲ್ಲ. "ವಿದೇಶಿ ಪದಗಳನ್ನು ಬಳಸಿಕೊಳ್ಳಲು ಅನಾದಿ ಕಾಲದಿಂದಲೂ ವ್ಯಾಕರಣದಲ್ಲಿಯೇ ಅವಕಾಶ ಕೊಟ್ಟಿದ್ದಾರೆ ನಮ್ಮ ಸಂತರು" ಎಂದು ತಮಿಳು ಪ್ರಾಚೀನ ವ್ಯಾಕರಣ 'ತೊಲ್‌ಕಾಪ್ಪಿಯಮ್' ಗ್ರಂಥದಿಂದ ಉದಾಹರಣೆಗಳನ್ನು ಕೊಡುತ್ತಾರೆ.

ಹಿಂದಿ ಅಥವಾ ಬೇರೆ ಭಾಷೆಯ ಕಲಿಕೆಯು ತಮಿಳು ಭಾಷೆಯ ಬೆಳವಣಿಗೆಗೆ ಅಡ್ಡಿಪಡಿಸುತ್ತದೆ ಎಂದು ಗರ್ಜಿಸುವವರ ವಾದವನ್ನು ಅವರು ಅಲ್ಲಗಳೆದಿದ್ದಾರೆ. ತಮಿಳುನಾಡಿನ ಇತಿಹಾಸ ಅವರಿಗೆ ತಿಳಿಯದು ಎಂದು ತಿಳಿಸುತ್ತಾ ತಮಿಳು ಭಾಷೆ ಎಲ್ಲಾ ದಿಕ್ಕುಗಳಿಂದ ಎಲ್ಲಾ ಭಾಷೆಗಳಿಂದ ಒಳ್ಳೆಯದೆಲ್ಲವನ್ನೂ ಸ್ವಾಗತಿಸುತ್ತದೆ, ಹಾಗೆಯೇ ತನ್ನನ್ನು ತಾನು ಬೆಳೆಸಿಕೊಂಡು ಬರುತ್ತಿದೆ ಎಂಬ ವಿಚಾರ ಅವರಿಗೆ ಮನವರಿಕೆ ಮಾಡುತ್ತಾರೆ.

ಆದರೆ ಅದೇ ಸಮಯದಲ್ಲಿ ರಾಜಾ ಸರ್ ಅಣ್ಣಾಮಲೈ ಚೆಟ್ಟಿಯಾರರು ಆರಂಭಿಸಿದ 'ತಮಿಳು ಸಂಗೀತ' ಚಳುವಳಿಯ ಬಗೆಗೆ ಅವರು ಪೂರ್ಣವಾದ ಒಲವು ತೋರಿಸುತ್ತಾರೆ. ತಮಿಳುನಾಡಿನ ಸಂಗೀತ ವಿದ್ವಾಂಸರು ತೆಲುಗು, ಸಂಸ್ಕೃತ ಭಾಷೆಗಳಲ್ಲಿ ಯಾವಾಗಲೂ ಹಾಡುಗಳನ್ನು ಹೇಳುವುದನ್ನು ಅವರು ಪ್ರತಿಭಟಿಸುತ್ತಾರೆ. ಸಂಗೀತದ ಸಂಪೂರ್ಣಾನುಭವ ಆಗುವುದು ಹಾಡಿನ ತಿರುಳನ್ನು ಹಾಡುವವನು ಹಾಗೂ ಕೇಳುಗನು ಸರಿಯಾಗಿ ಅರ್ಥಮಾಡಿಕೊಂಡಾಗ ಮಾತ್ರ. ಆದ್ದರಿಂದ ತಮಿಳು ಹಾಡುಗಳನ್ನು ಹಾಡಬೇಕೆಂದು ಅವರು ವಾದಿಸುತ್ತಾರೆ. ತಮಿಳು ಸಂಗೀತದ ಬಗೆಗೆ 'ತಮಿಳ್ ಇಸೈ' ಎಂಬ ಒಂದು ಪದ್ಯದಲ್ಲಿ ಅವರು ಹೀಗೆ ಹೇಳುತ್ತಾರೆ :

> "ಸಂಗೀತವೆಂದರೆ ಅದು ತನ್ನ ಮಾಧುರ್ಯದಿಂದ ಕೇಳುಗನನ್ನು
> ಉದ್ರೇಕಿಸಬೇಕು. ಅದರಲ್ಲಡಗಿರುವ ವಿಚಾರವನ್ನು
> ಧ್ವನಿಯನ್ನು ತಿಳಿದು ಹಾಡುಗಾರನನ್ನು ಅವನ ಮನಸ್ಸನ್ನು
> ತಿಳಿಯಲು ಸಹಾಯಕವಾಗಬೇಕು. ತಿಳಿಯದ ಭಾಷೆಯಲ್ಲಿ
> ಹಾಡುವುದು ಕುರುಡನಿಗೆ ಬೆಳಕು ತೋರಿಸಿದಂತಾಗುತ್ತದೆ."

ಮುಂದುವರೆಯುತ್ತಾ ಅವರು ಹೀಗೆ ವಾದಿಸುತ್ತಾರೆ : "ಕಲೆಯೆಂದರೆ ನಮ್ಮ ಉದ್ವೇಗಗಳನ್ನು ಅದು ಬಿಗಿ ಹಿಡಿಯಬೇಕು, ಗಮನವನ್ನು ಬುದ್ಧಿಶಕ್ತಿಯನ್ನು ಅದು ಆಹ್ಲಾದಗೊಳಿಸಬೇಕು. ನಮ್ಮ ಗಮನ ಬೇರೆಡೆಗೆ ಸೆಳೆಯದಂತೆ ಏಕಾಗ್ರಚಿತ್ತವಾಗಿರಿಸುವುದು ಸಂಗೀತದ ಉದ್ದೇಶವಲ್ಲವೆ ? ಯಾವುದೋ ಒಂದು ಹಂತದಲ್ಲಿ ತಲೆತೂಗಿ ಅದರ ಬಗೆಗೆ ಮೆಚ್ಚುಗೆ ಸೂಚಿಸುವುದರಿಂದ ಅದರಲ್ಲಡಗಿರುವ ಸೌಂದರ್ಯದ ಸವಿಯನ್ನು ಉಣಲು ಸಾಧ್ಯವಾಗುವುದೆ ?"

## ಸಾಮಾಜಿಕ ದೃಷ್ಟಿ

ಮೂಲತಃ ಒಬ್ಬ ಕವಿಯಾದರೂ ರಾಮಲಿಂಗಮ್ ಪಿಳ್ಳೆಯವರು ಹಗಲುಗನಸುಗಾರರಾಗಿರಲಿಲ್ಲ. ಮುಂಗೋಪಿಯಾಗಿದ್ದ ವಿಲಿಯಮ್ ಮೋರಿಸ್ ಕೇಳಿದ್ದನಂತೆ, "ಡೊಂಕನ್ನು ಸರಿಪಡಿಸಲು ನಾನೇಕೆ ಹೆಣಗಬೇಕು?" ಎಂದು. ನಮ್ಮ ದೇಶದ ಸಾಮಾಜಿಕ, ಆರ್ಥಿಕ ಸಮಸ್ಯೆಗಳೇನೆಂದು ಕವಿವರ್ಯರು ಗಂಭೀರವಾಗಿ ಯೋಚಿಸಿ ಅವುಗಳ ನಿವಾರಣೆಗೆ ಮಾರ್ಗೋಪಾಯಗಳನ್ನು ಕಾಣಲು ಸದಾ ಹೆಣಗಿದರು. ಅವರು ಕಾಣುತ್ತಿದ್ದ ಯಾವುದೇ ಮಾರ್ಗವಾಗಲಿ ಅದು ಗಾಂಧೀವಾದದ ಹಿನ್ನೆಲೆಯಲ್ಲಿರುತ್ತಿತ್ತು. ಬಡತನದ ಕುರುಹು ಕೂಡ ಇಲ್ಲದ ನವಸಾಮಾಜಿಕ ವರ್ಗವನ್ನು ಸ್ಥಾಪಿಸಲು ಅವರು ಆಸೆಪಟ್ಟರು. ಬಡಜನತೆಯು ಸಿಡಿದೆದ್ದು ಬಂಡೇಳುವ ಮುನ್ನ ಧನಿಕವರ್ಗದವರ ಹೃದಯ ಪರಿವರ್ತನೆ ಆಗಬೇಕೆಂಬುದು ಅವರ ಅಪೇಕ್ಷೆ. ಹಿಂಸಾಮಾರ್ಗದಿಂದ ಆರ್ಥಿಕ ಸಮಾನತೆಯನ್ನು ನೆಲೆಗೊಳಿಸುವ ಕಮ್ಯೂನಿಸ್ಟ್ ತತ್ವದ ಬಗೆಗೆ ಅವರಿಗೆ ಗೊತ್ತಿತ್ತು. ಶ್ರೀಮಂತ ವರ್ಗ ಸ್ವಲ್ಪ ಮನಸ್ಸು ಮಾಡಿದರೆ ಬಡಜನರ ಈ ಆಂದೋಳನವನ್ನು ತಡೆಯಬಹುದೆಂದು ಅವರ ನಂಬಿಕೆ. ಗಾಂಧೀಜಿ ಹಾಗೂ ವಿನೋಬಾ ಅವರು ಬೋಧಿಸಿರುವ ತತ್ವಗಳನ್ನು ಈ ನಿಟ್ಟಿನಲ್ಲಿ ಅನುಸರಿಸಲು ಅವರು ಕರೆ ನೀಡಿದರು. ವಿನೋಬಾ ಅವರು ಭೂದಾನ ಚಳುವಳಿಯನ್ನು ಪ್ರಾರಂಭಿಸಿದಾಗ ಅದಕ್ಕೆ ಬೆಂಬಲ ನೀಡಿ ಸ್ವಯಂಸೇವಕರ ಉಪಯೋಗಕ್ಕೆ ಮಾರ್ಗಸಂಚಲನ ಗೀತೆಗಳನ್ನು ಅವರು ರಚಿಸಿದರು. ಭೂಮಿಯೆಲ್ಲ ಭಗವಂತನಿಗೆ ಸೇರಿದ್ದು, ಆದ್ದರಿಂದ ಹಳ್ಳಿಯ ಎಲ್ಲಾ ಭೂಮಿ ಎಲ್ಲರಿಗೂ ಸ್ವಂತ ಎಂದು ಅವರು ಪ್ರತಿಪಾದಿಸಿದರು.

'ಭೂಮಿದಾನ ಯಾತ್ತಿರೈ' (ಭೂದಾನ ಯಾತ್ರೆ) ಎಂಬ ಒಂದು ಪದ್ಯದಲ್ಲಿ ಭೂ ಒಡೆತನದಲ್ಲಾಗಿರುವ ಅನ್ಯಾಯವನ್ನು ಅವರು ಹೀಗೆ ಖಂಡಿಸಿದ್ದಾರೆ : "ದುಡಿದು ಧಾನ್ಯವನ್ನು ಬೆಳೆದು ಇತರರಿಗಾಗಿ ಬದುಕುವ ನೇಗಿಲ ಯೋಗಿಗೆ ತನ್ನದೇ ಆದ ಒಂದು ಚೂರು ನೆಲವಿಲ್ಲದೆ ಸೊರಗಬೇಕೆ ? ಅದೇ ಸಮಯದಲ್ಲಿ ಯಾರಿಗೂ ಪ್ರಯೋಜನವಿಲ್ಲದ ಕೆಲವು ಧನಿಕರು ಎಲ್ಲಾ ನೆಲವನ್ನು ತಾವೇ ಅನುಭವಿಸುತ್ತಾ ಸುಖಜೀವನ ನಡೆಸುವುದು ಸರಿಯೆ ?"

ಆರ್ಥಿಕ ಸಮಾನತೆ ಎಂದು ಅವರು ಹೇಳುವಾಗ ಶ್ರೀಮಂತರನ್ನು ಬಡವರನ್ನಾಗಿ ಕೆಳಗಿಳಿಸಬೇಕೆಂದಲ್ಲ ಅವರ ವಾದ. ತುಳಿಯಲ್ಪಟ್ಟವರನ್ನು ಮೇಲಕ್ಕೆಬ್ಬಿಸುವುದು ಮಾತ್ರ ಅವರ ಉದ್ದೇಶ. ಇಂತಹ ಸಮಾನತೆಯನ್ನು ಒಲವು ಹಾಗೂ ಸತ್ಯದ ತಳಹದಿಯಲ್ಲಿ ಮಾತ್ರ ಸ್ಥಾಪಿಸಬೇಕು; ಹಿಂಸೆ, ಯುದ್ಧ ಮುಂತಾದ ಕ್ರಾಂತಿಕಾರಕ ಮಾರ್ಗದಿಂದಲ್ಲ ಎಂಬುದು ಅವರ ನಿಲುವು. 'ಪುರಟ್ಚಿವೇಂಡುಮ್' (ಕ್ರಾಂತಿ ಬೇಕು) ಎಂಬ ಒಂದು ಕವನದಲ್ಲಿ 'ಕ್ರಾಂತಿ'ಯು ಕಲ್ಪನೆಯಲ್ಲಿಯೇ ಒಂದು ಕ್ರಾಂತಿಯಾಗಬೇಕೆಂದು ಅವರು ವಾದಿಸಿದ್ದಾರೆ. "ದುರ್ಮಾರ್ಗದಿಂದ ಬಂದದ್ದೆಲ್ಲ ಅದೇ ದಾರಿಯಲ್ಲಿ

ನಾಶವಾಗುತ್ತದೆ. ಸನ್ಮಾರ್ಗದಲ್ಲಿ ಎಂದರೆ ಸತ್ಯದಿಂದ, ಪ್ರೀತಿಯಿಂದ ಪಡೆದದ್ದು ಮಾತ್ರವೆ ನಮಗೆ ಸ್ಥಿರ" ಎಂದು ಗಾಂಧಿವಾದವನ್ನು ಒತ್ತಿ ಹೇಳಿದ್ದಾರೆ.

ಪರಿಪೂರ್ಣ ಸಾಮಾಜಿಕ ಹಾಗೂ ಆರ್ಥಿಕ ಸಮಾನತೆಯನ್ನು ನಿರೀಕ್ಷಿಸುವುದು ಸಾಧ್ಯವೂ ಇಲ್ಲ ಸಾಧುವೂ ಅಲ್ಲ ಎಂಬುದನ್ನು ಅವರು ಮನಗಂಡಿದ್ದರು. ಜೀವನಕ್ಕೆ ತೀರಾ ಅತ್ಯಾವಶ್ಯಕ ವಸ್ತುಗಳಲ್ಲಿ ಮಾತ್ರ ಸಮಾನತೆಯನ್ನು ನಿರೀಕ್ಷಿಸಬೇಕು. ಅದೇ ರೀತಿ ಜಾತಿರಹಿತ ಸಮಾಜದಲ್ಲಿಯೂ ಅವರು ನಂಬಿಕೆಯನ್ನು ತೋರುವುದಿಲ್ಲ. "ಜಾತಿ ಬೇಧವನ್ನು ತೊಡೆದು ಹಾಕಿದಾಗ ಮತ್ತೇನಾದರೂ ವೈಮನಸ್ಸು ಹುಟ್ಟುತ್ತದೆ" ಎಂದು ಹೇಳುವ ಅವರು ವೈವಿಧ್ಯದಲ್ಲಿ ಏಕತೆಯನ್ನು ಕಾಣಬೇಕು, ಪಾರಮಾರ್ಥಿಕ ಸಮಾನತೆಯಲ್ಲಿ ತೃಪ್ತಿಪಡಬೇಕು ಎಂದು ಸಮಾಧಾನ ಹೇಳಿದ್ದಾರೆ. ಅಸ್ಪೃಶ್ಯತೆ, ಮೇಲು ಜಾತಿ, ಕೀಳು ಜಾತಿ ಎಂಬ ಬೇಧಗಳು, ಭಾವನೆಗಳು ತೊಲಗಬೇಕು. ಭಾರತೀಯರೆಲ್ಲಾ ಭಾರತಮಾತೆಯಾದ ಒಬ್ಬಳೇ ತಾಯಿಯ ಮಕ್ಕಳು ಎಂಬ ಭಾವನೆಯಿಂದ, ಜಾತ್ಯಾತೀತ ಮನೋಭಾವವನ್ನು ಬೆಳೆಸಿಕೊಂಡು ಸೌಹಾರ್ದತೆಯಿಂದ ಬಾಳಬೇಕು ಎಂದು ಹೇಳಿದ್ದಾರೆ.

ಸಮಾಜದಲ್ಲಿ ಮಹಿಳೆಯರಿಗೆ ನೀಡಬೇಕಾದ ಸ್ಥಾನವನ್ನು ಪ್ರಸ್ತಾಪಿಸುತ್ತಾ ಅವರು ಪುರುಷರೊಡನೆ ಸಮಾನ ಸ್ಥಾನವನ್ನು ಪಡೆಯಬೇಕೆಂದು ಪ್ರತಿಪಾದಿಸಿದ್ದಾರೆ. ಇಲ್ಲಿಯೂ ಅವರು ಸಂಪೂರ್ಣ ಸಮಾನತೆಯನ್ನು ಬೇರೆ ರೀತಿಯಲ್ಲಿಯೇ ಅರ್ಥೈಸಿದ್ದಾರೆ. ಸ್ತ್ರೀಯರು ಅವರದೇ ಆದ ನಿಸ್ವಾರ್ಥ ಪ್ರೇಮ, ದಯೆ, ಪಾತಿವ್ರತ್ಯ ಮುಂತಾದ ಸದ್ಗುಣಗಳನ್ನು ಪಾಲಿಸಿಕೊಂಡು ಬರಬೇಕೆಂದು ಒತ್ತಿ ಹೇಳಿದ್ದಾರೆ. ಅದೇ ಸಮಯದಲ್ಲಿ ಮಹಿಳೆಯರು ಎಲ್ಲಾ ರೀತಿಯ ರಾಜಕೀಯ, ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಹೇಳಿದ್ದಾರೆ. ಹೆಂಗಸನ್ನು 'ಮಾಯೆ' ಎಂದು ಹೇಳುವ ಮಾತಿನಲ್ಲಿ ಅವರಿಗೆ ಸ್ವಲ್ಪವೂ ನಂಬಿಕೆಯಿಲ್ಲ. ಹೆಂಗಸಿನೊಡನೆ ಅಸಭ್ಯವಾಗಿ ವರ್ತಿಸಿ ಅವಳನ್ನು ಅಪಾರ್ಥಮಾಡಿಕೊಂಡವರ ಅನೌಚಿತ್ಯ ಮಾತು ಇದು ಎಂದು ಅವರು ಅಭಿಪ್ರಾಯ. ಮಹಿಳೆಯು ಪ್ರೇಮ, ಸಹನೆ, ನಿಸ್ವಾರ್ಥಸೇವೆ ಇವುಗಳನ್ನು ಸಾಕಾರವಾಗಿ ಪಡೆದು ತಾಯಿ, ಮಡದಿ, ಸಹೋದರಿ, ಮಗಳು ಹಾಗೂ ಆತಿಥೇಯಳಾಗಿ ಸೇವೆ ಮಾಡುವವಳು. ಪಾತಿವ್ರತ್ಯದ ಬಗೆಗೆ ಹೇಳುತ್ತಾ ಇದು ಪುರುಷ ಸ್ತ್ರೀಯರಿಬ್ಬರಿಗೂ ಸಮಾನವೆಂದು ಅಭಿಪ್ರಾಯ ಪಟ್ಟಿದ್ದಾರೆ. ಆಚರಣೆಯಲ್ಲಿ ಇದು ಸ್ತ್ರೀಯರಿಗೆ ಹೆಚ್ಚು ಅನ್ವಯಿಸುತ್ತದೆ. ಏಕೆಂದರೆ ಸ್ವಾಭಾವಿಕವಾಗಿ ಸ್ತ್ರೀಯರು ಹೆಚ್ಚು ಸಚ್ಚಾರಿತ್ರ್ಯದಿಂದ ಕೂಡಿರುವುದರಿಂದ ಗಂಡಸಿನ ಅನೈತಿಕ ವ್ಯವಹಾರವನ್ನು ಅವರು ಸಹಿಸಲಾರರು, ಆದರೆ ಗಂಡಸರು ಹಾಗಲ್ಲ.

### ವಿಶ್ವಶಾಂತಿ

ದಿನನಿತ್ಯ ಕುಸಿಯುತ್ತಿರುವ ಮೌಲ್ಯಗಳನ್ನು ಕಂಡು ಅದನ್ನು ತಡೆಯಲು

ಸಮಾಜದ ವಿವಿಧ ವರ್ಗದವರಿಗೆ ಹಿತವಾದವನ್ನು ಅವರು ಹೇಳಿದ್ದಾರೆ. 'ಮಂಗನಂಕ್ಕ್' (ಮಂಗನಿಗೆ) ಎಂಬ ಪದ್ಯದಲ್ಲಿ ಮಂಗನಿಗೆ ಬುದ್ಧಿವಾದ ಹೇಳುತ್ತಾ, ಹಿರಿಯರಿಗೆ ಗೌರವ ಕೊಡಲು, ಪರಮಾತ್ಮನನ್ನು ಪೂಜಿಸಲು, ಬಡವರಿಗೆ ಸಹಾಯ ಮಾಡಲು, ಇರುವುದರಲ್ಲಿಯೇ ತೃಪ್ತಿಪಡೆಯಲು, ಎಲ್ಲರೊಡನೆ ಸಹಬಾಳ್ವೆ ಹಾಗೂ ಸವಿಮಾತನಾಡುವಂತೆ ಹಿತ ನುಡಿದಿದ್ದಾರೆ. 'ಮಾನವನಂಕ್ಕ್' (ವಿದ್ಯಾರ್ಥಿಗಳಿಗೆ) ಎಂಬ ಮತ್ತೊಂದು ಪದ್ಯದಲ್ಲಿ ಗುರುಗಳಿಗೆ ಗೌರವ ತೋರುವಂತೆ, ಶಿಸ್ತು ಜೀವನ, ರಾಜಕೀಯ ಹಾಗೂ ದುಶ್ಚಟಗಳಿಂದ ದೂರವಿರುವಂತೆ ವಿದ್ಯಾರ್ಥಿಗಳಿಗೆ ಉಪದೇಶ ನೀಡಿದ್ದಾರೆ. 'ಆಸಾನಂಕ್ಕ್' (ಗುರುಗಳಿಗೆ) ಎಂಬ ಪದ್ಯದಲ್ಲಿ ಉಪಾಧ್ಯಾಯರು ವಿದ್ಯಾರ್ಥಿಗಳೊಡನೆ ಎಂತಹ ನಿಕಟ ಸಂಬಂಧವನ್ನು ಬೆಳೆಸಿಕೊಳ್ಳಬೇಕು, ತಪ್ಪುಗಳನ್ನು ಔದಾರ್ಯದಿಂದ ಕಾಣುವ ಅಗತ್ಯವನ್ನು, ನಡೆನುಡಿಯಲ್ಲಿ ಮಾದರಿಯಾಗಿರುವಂತೆಯೂ ಹಿತನುಡಿದಿದ್ದಾರೆ. ಅವರು ಲಾರಿ ಡ್ರೈವರುಗಳನ್ನು ಬಿಡುವುದಿಲ್ಲ. 'ಮೋಟಾರು ಓಡಿಗಳುಕ್ಕು' (ಮೋಟಾರು ಓಡಿಸುವವರಿಗೆ) ರಸ್ತೆ ನಿಯಮಗಳನ್ನು ಕರಾರುವಾಕ್ಕಾಗಿ ಪಾಲಿಸುವಂತೆಯೂ ಕುಡಿದು ಮತ್ತೇರಿದಾಗ ವಾಹನವನ್ನು ಓಡಿಸಕೂಡದೆಂದೂ ಹಿತವಚನ ಹೇಳಿದ್ದಾರೆ. ಸಾಮಾನ್ಯ ಜನರಿಗೆ ಅವರು ನೀಡುವ ಹಿತಚಿಂತನೆ–ಸಾಲ ಮಾಡಬೇಡಿ, ನಿಸ್ವಾರ್ಥತೆ, ಪ್ರಾಮಾಣಿಕತೆ ಹಾಗೂ ಪ್ರೀತಿಯನ್ನು ಬೆಳೆಸಿಕೊಳ್ಳುವಂತೆಯೂ ಏನಾದರೊಂದು ಗುಡಿಕೈಗಾರಿಕೆಯಲ್ಲಿ ತೊಡಗುವಂತೆಯೂ ಹೇಳಿದ್ದಾರೆ.

ವಿಶ್ವ ಜನಾಂಗಕ್ಕೆ ಅವರು ನೀಡುವ ಸಲಹೆ–ರಕ್ತಪಾತವನ್ನುಂಟುಮಾಡುವ ಸಮರವನ್ನು ತಡೆದು ವಿಶ್ವಶಾಂತಿಗೆ ದಾರಿಮಾಡಿಕೊಡಿ. 'ಅವಳುಮ್ ಅವನುಮ್' ಎಂಬ ಕಾದಂಬರಿಯಲ್ಲಿ ಇಂದಿನ ಯುದ್ಧನೀತಿಯನ್ನು ಕ್ರಮವನ್ನು ಅವರು ಖಂಡಿಸುತ್ತಾರೆ. ಇದೇನಿದ್ದರೂ ವಾಸ್ತವದಲ್ಲಿ ಹೇಡಿತನದ ಕ್ರಮ, ಗಾಂಧೀಜಿಯವರ ಅಹಿಂಸಾ ಮಾರ್ಗವೇ ಯುದ್ಧವನ್ನು ಎದುರಿಸಲು ಸರಿಯಾದ ಕ್ರಮ ಎಂದು, ಅದು ವೀರಮಾರ್ಗವೆಂದು ಪ್ರತಿಪಾದಿಸಿದ್ದಾರೆ! ಯಾರು ತಾವು ಪೆಟ್ಟು ತಿಂದರೂ ಬೇರೊಬ್ಬರ ಮೇಲೆ ಕೈಮಾಡಲು ಹಿಂತೆಗೆಯುತ್ತಾರೋ ಅಂತಹವರೇ ನಿಜವಾದ ವೀರರು. ಏನಿದ್ದರೂ ಪ್ರೀತಿಯಿಂದ ಗೆಲ್ಲಬೇಕೇ ಹೊರತು ದ್ವೇಷದಿಂದಲ್ಲ. ಗಾಂಧೀಜಿಯವರ ಹಿರಿಮೆಯನ್ನು ಕುರಿತ 'ಕರುಣೈ ಜ್ಯೋತಿ' (ಕರುಣಾ ಜ್ಯೋತಿ) ಎಂಬ ಪದ್ಯದಲ್ಲಿ ಹೀಗೆ ಹಾಡಿದ್ದಾರೆ:

> ಯುದ್ಧಪ್ರಿಯ ಹಿಟ್ಲರ್, ಅವನ ಅನುಯಾಯಿ
> ಮುಸಲೋನಿ ಎಲ್ಲಿ ?
> ನಂಬಿಕೆ ದ್ರೋಹಿ ಯುದ್ಧವೀರ
> ಟೋಜೋ ಎಲ್ಲಿ ?
> ಲೋಕ ನಾಶಕರಾಗಿ ನಶಿಸಲಿಲ್ಲವೆ ?

ವಿನಾಶವನ್ನು ಕಣ್ಣಾರೆ ಕಂಡು ನಾವು
ಯುದ್ಧ ಮಾರ್ಗವ ಹಿಡಿವುದು ಹಿತವೆ ?
ತಾಯಿಯು ಮಮತೆಯು ಸಾಕಾರಮೂರ್ತಿ
ಗಾಂಧಿಮಾರ್ಗ ಶಾಂತಿ ಮಾರ್ಗದಲಿ
ನಾವು ನಡೆಯೋಣ.

'ವೆರ್ರಿ ಏದು' (ಗೆಲವು ಯಾವುದು) ಎಂಬ ಪದ್ಯದಲ್ಲಿ ಅವರು ಹೇಳುತ್ತಾರೆ :

ಗೆಲವು ಗೆಲವು ಎಂಬರು
ಹಿನ್ನಲೆ ಏನೆಂದು ಅರಿಯಂದೆ
ಲೋಕದಲ್ಲಿ ಸಂತ್ರ ಮಂತ್ರ, ಕಂಡಲ್ಲ
ಗೋಳಾಡುವ ತಾಯಂದಿರು,
ರೋಧಿಸುವ ಬಂಧುಗಳು
ಇದು ಗೆಲವಿನ ಕತೆ.

ಆಧುನಿಕ ಯುದ್ಧತಂತ್ರದ ಅನುಪಯುಕ್ತತೆ, ಅದರಿಂದಾಗುವ ದುಷ್ಪರಿಣಾಮ, ಗೆದ್ದವರ ಸೋತವರ ಇಬ್ಬರ ಮೇಲಾಗುವ ಕಷ್ಟ ನಷ್ಟಗಳ ವಿಚಾರವನ್ನು ಈ ಸಾಲುಗಳಲ್ಲಿ ವಿವರಿಸಿದ್ದಾರೆ. 'ಆಯುಧ ಬಲತ್ತೈ ನಂಬಾದೆ' (ಶಸ್ತ್ರ ಬಲವನ್ನು ನಂಬದಿರು) ಎಂಬ ಶೀರ್ಷಿಕೆಯ ಪದ್ಯದಲ್ಲಿ ಅಣುಬಾಂಬು ವಾಸ್ತವವಾಗಿ ಅಜ್ಞಾನದ ಒಂದು ಉತ್ಪನ್ನವೇ ಹೊರತು ವಿಜ್ಞಾನದ ಉತ್ಪನ್ನವಲ್ಲವೆಂದು ಹೇಳಿದ್ದಾರೆ.

ಈ ರೀತಿ ರಾಮಲಿಂಗ ಕವಿವರ್ಯರು ತಮಿಳುನಾಡಿನ ಜನತೆಗೆ ಮಾತ್ರವಲ್ಲದೆ ಇಡಿ ಭಾರತದ ಹಾಗೂ ಸಮಗ್ರ ಲೋಕಹಿತಕ್ಕಾಗಿ ಬರೆದಿದ್ದಾರೆ. ದೇಶ, ಭಾಷೆ, ಜಾತಿ ಎಲ್ಲವನ್ನು ಮೆಟ್ಟಿನಿಂತ ಒಬ್ಬ ನಿಜವಾದ ಮಾನವತಾವಾದಿಗಳಾಗಿದ್ದಾರೆ ಅವರು. ನಿಜವಾದ ಕಾವ್ಯದ ಧ್ಯೇಯವು ಅವರು ಹೇಳುವಂತೆ 'ಅಖಂಡ ಪ್ರಪಂಚ'.

## ನೀಳ್ಗವನಗಳು

ಮೇಲೆ ಹೇಳಿದ ಲಘುಕವನಗಳ ಜೊತೆಗೆ ಅವರು ಅನೇಕ ನೀಳ್ಗವನಗಳನ್ನು ರಚಿಸಿದ್ದಾರೆ. ಅವೆಲ್ಲವೂ ನಿಸರ್ಗಳ ನಡೆಗೆ, ಉತ್ತಮ ಪ್ರಾಸ ಹಾಗೂ ಶೈಲಿಗೆ ಹೆಸರು ಪಡೆದು ಜನಪ್ರಿಯ ಕವನಗಳಾಗಿವೆ. ಪದ್ಯಗಳಾದರೂ ಪದ್ಯದ ಕಾದಂಬರಿಗಳಂತೆ ಓದಿಸಿಕೊಂಡು ಹೋಗುತ್ತವೆ. ತಮಿಳಿನಲ್ಲಿ ಅಕವಲ್ ಎಂದು ಪ್ರಸಿದ್ಧವಾಗಿರುವ ಛಂದಸ್ಸಿನಲ್ಲಿ ಬಹುಮಟ್ಟಿನ ಈ ಎಲ್ಲಾ ಕಾವ್ಯಗಳನ್ನು ಅವರು ರಚಿಸಿದ್ದಾರೆ. ಈ ಛಂದಸ್ಸಿನಲ್ಲಿ ಪ್ರತಿ ಸಾಲು ತನ್ನದೇ ಪ್ರಾಸವನ್ನು ಹೊಂದಿದ್ದು ಮುಂದಿನ ಸಾಲಿನೊಡನೆ ಸಂಬಂಧ ಪಡೆದಿರುವುದಿಲ್ಲ. ಆದರೆ ಅರ್ಥದ ದೃಷ್ಟಿಯಲ್ಲಿ ಎಲ್ಲಾ ಸಾಲುಗಳು ಪರಸ್ಪರ

ಹೊಂದಿಕೊಂಡು ಅವೆಲ್ಲಾ ಸೇರಿದಾಗ ಒಂದು ವಾಕ್ಯವಾಗುತ್ತದೆ. ಕೆಲವು ನಿರ್ಣಾಯಕ ಸಮಸ್ಯೆಗಳನ್ನು ಕುರಿತು ತಮ್ಮ ಅಭಿಪ್ರಾಯವನ್ನು ಅವರು ಕಾವ್ಯದ ಪಾತ್ರಗಳ ಬಾಯಲ್ಲಿ ಹೇಳಿಸುತ್ತಾರೆ. ಇಲ್ಲಿನ ಕೆಲವು ಪಾತ್ರಗಳು ನಿಜವೂ, ವ್ಯಕ್ತಿಗಳು, ಘಟನೆಗಳು ಸತ್ಯವೂ ಆಗಿವೆ. ಕೆಲವು ಪಾತ್ರಗಳು, ಘಟನೆಗಳು ಕಾಲ್ಪನಿಕವೂ ಆಗಿವೆ. ಮಹಾತ್ಮಾ ಗಾಂಧಿ ಮತ್ತು ಸಿಪಾಯಿ ದಂಗೆ ಕುರಿತು ಅವರು ಬರೆದಿರುವ ನೀಳ್ಗವನಗಳು ಮೊದಲನೆಯ ಗುಂಪಿಗೂ 'ಅವಳುಮ್ ಅವನುಮ್' (ಅವಳು ಮತ್ತು ಅವನು) ಹಾಗೂ 'ಅನ್ಬು ಚೆಯ್ದ ಅರ್ಬುದಮ್' (ಪ್ರೀತಿಯ ಮಹಿಮೆ) ಇವು ಎರಡನೆಯ ಗುಂಪಿಗೆ ಸೇರುತ್ತವೆ.

ಮತ್ತೊಂದು ಪ್ರಸಿದ್ಧ ಲಘುಕಾವ್ಯ ಅವರು ಭಾರತ ದೇಶವನ್ನು ಕುರಿತು ಬರೆದಿರುವುದು. 'ನಾಟ್ಟು ಕುಮ್ಮಿ' ಎಂಬ ಹೆಸರಿನ ಅದು ಜಾನಪದ ಗೀತೆಯ ರೀತಿಯಲ್ಲಿ ರಚಿಸಲಾಗಿದೆ. ಕುಮ್ಮಿ ಎಂಬ ಕುಣಿತದಲ್ಲಿ ಹೆಂಗಸರು ಚಕ್ರಾಕಾರವಾಗಿ ನಿಂತು ಹಾಡಿನ ಪ್ರಾಸ, ತಾಳ ಅನುಸರಿಸಿ ಕೋಲಾಟ ಇಲ್ಲವೆ ಚಪ್ಪಾಳೆ ಹಾಕುತ್ತಾ ಸುತ್ತಲೂ ತಿರುಗುತ್ತಾ ಈ ಹಾಡನ್ನು ಹಾಡುತ್ತಾರೆ. ಭಾರತವು ಸ್ವಾತಂತ್ರ್ಯ ಪಡೆಯುವ ಮುನ್ನವೇ ರಚಿತವಾದ ಈ ಹಾಡುಗಳ ವೈಶಿಷ್ಟ್ಯ ಗೇಯತೆ ಹಾಗೂ ಪ್ರಾಸ.

ಭಾರತಮಾತೆಯನ್ನು ಒಬ್ಬ ತಾಯಿಗೆ ಹೋಲಿಸಿ ಆಕೆಯನ್ನು ತನ್ನ ಮಕ್ಕಳೇ ಉದಾಸೀನ ಮಾಡಿರುವ ರೀತಿಯಲ್ಲಿ ಅವರು ಇಲ್ಲಿ ವಿವರಿಸಿದ್ದಾರೆ. ಪ್ರಾಚೀನ ಭಾರತದ ವೈಭವವನ್ನು ವಿದೇಶೀಯ ಆಡಳಿತದ ಮತರದ ದುಃಸ್ಥಿತಿಯನ್ನು ಅವರು ವರ್ಣಿಸಿದ್ದಾರೆ. ಕಳೆದುಹೋದ ವೈಭವವನ್ನು ಮತ್ತೆ ಪಡೆಯುವ ಮಾರ್ಗ ವಿಧಾನಗಳನ್ನು ಚರ್ಚಿಸಿದ್ದಾರೆ. ತಾಯ್ನಾಡನ್ನು ಪೂಜಿಸುವಂತೆ ಭಾರತೀಯರಿಗೆ ಕರೆ ನೀಡಿದ್ದಾರೆ. ಪರಸ್ಪರ ಐಕಮತ್ಯವನ್ನು, ಸೌಹಾರ್ದತೆಯನ್ನು ಬೆಳೆಸಿಕೊಂಡು, ವಿದೇಶಿ ವಸ್ತುಗಳನ್ನು ತಿರಸ್ಕರಿಸಿ ಸ್ವದೇಶಿ ಭಾವನೆಯನ್ನು ಮೈಗೂಡಿಸಿಕೊಳ್ಳಲು ಕರೆ ನೀಡಿದ್ದಾರೆ.

ಮೊದಲನೆಯ ಸ್ವಾತಂತ್ರ್ಯಸಮರವೆಂದು ಕರೆಯಲಾಗುವ ಸಿಪಾಯಿದಂಗೆಯನ್ನು ಕುರಿತು ಅವರು ಒಂದು ಲಘು ಕಾವ್ಯವನ್ನು ರಚಿಸಿದ್ದಾರೆ. ಈ ದಂಗೆಯ ಮುಂದಾಳುಗಳಾಗಿದ್ದ ರಾಣಿ ಲಕ್ಷ್ಮಿಬಾಯಿ, ತಾಂತ್ಯಾಟೋಪಿ, ಕನವರಸಿಂಗ್ ಮುಂತಾದವರ ವೀರ ಸಾಹಸಗಳನ್ನು ಇದರಲ್ಲಿ ವಿವರಿಸಿದ್ದಾರೆ. ಬ್ರಿಟಿಷರ ವಿರುದ್ಧ ಸಿಡಿದೆದ್ದ ವೀರರಪಾಂಡ್ಯ ಕಟ್ಟಾ ಬೊಮ್ಮನ್, ಊಮೈದುರೈ ಇವರನ್ನು ಹಾಗೂ 1806ರಲ್ಲಿ ನಡೆದ ವೇಲೂರು ದಂಗೆಯನ್ನು ಮರೆಯಬೇಡಿರೆಂದು ತಮಿಳರನ್ನು ಅವರು ಎಚ್ಚರಿಸಿದ್ದಾರೆ. ಈ ಎಲ್ಲಾ ಸ್ವಾತಂತ್ರ್ಯ ಹೋರಾಟಗಾರರಿಗೆ ಶ್ರದ್ಧಾಂಜಲಿ ಸಲ್ಲಿಸುವಂತೆ ಅವರು ಕರೆ ನೀಡಿದ್ದಾರೆ.

ಮತ್ತೊಂದು ಕಾವ್ಯದಲ್ಲಿ ಗಾಂಧೀಜಿಯವರ ಪೂನಾ ಒಪ್ಪಂದದವರೆಗಿನ ಜೀವನ ಚರಿತ್ರೆಯನ್ನು ನಿರೂಪಿಸಿದ್ದಾರೆ. ಸಾಮಾನ್ಯರಿಗೂ ಹಾಡಲು ಸುಲಭವಾದ ಜನಪ್ರಿಯ ಮಟ್ಟು 'ನೊಂಡಿ ಚಿಂದು' ಎಂಬ ಶೈಲಿಯಲ್ಲಿ ಇದನ್ನು ರಚಿಸಿದ್ದಾರೆ.

ಅವರ ಅತ್ಯಂತ ದೀರ್ಘವಾದ ಲಘುಕಾವ್ಯವೆಂದರೆ 'ಅವಳುಂ ಅವನುಂ', ಇದನ್ನು 'ಅಕವಲ್' ಅಥವಾ 'ಆಸಿರಿಯಪಾ' ಎಂಬ ಛಂದೋರೂಪದಲ್ಲಿ ಬರೆಯಲಾಗಿದೆ. ಕಾವ್ಯಶೈಲಿ ಎಷ್ಟು ಸುಲಭವಾಗಿರುವುದೆಂದರೆ ಇಡೀ ಕಾವ್ಯವನ್ನು ಒಂದೇ ಪಟ್ಟಿನಲ್ಲಿ ಓದಿ ಮುಗಿಸಬಹುದು. ಕತೆಯು ಒಗಟುಗಳಿಂದ ಕೂಡಿದ್ದು ಓದುಗನ ಕುತೂಹಲ ಕೆರಳಿಸಿ ಆದಷ್ಟು ಬೇಗನೆ ಅವುಗಳ ಉತ್ತರವನ್ನು ಹುಡುಕಲು ಪುಟಗಳನ್ನು ತಿರುವಲು ಓದುಗನು ಕಾತುರನಾಗುತ್ತಾನೆ. ಪ್ರಚಲಿತ ಸಮಸ್ಯೆಗಳಿಗೆ ಕಥಾಪಾತ್ರಗಳ ಮೂಲಕ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದಾರೆ. ಬೋಧಪ್ರದವೂ ಮನರಂಜನೀಯವೂ ಆದ ಘಟನೆಗಳ ಸರಳ ಉಪಮೆ, ಮಧುರ ಪ್ರಾಸ, ಅಲ್ಲಲ್ಲೇ ಬಂಧಿಸಿ ನಿಲ್ಲುವ ವರ್ಣನೆ, ನಿರರ್ಗಳ ನಡೆ, ಬೆರಗುಗೊಳಿಸುವ ಸಂದೇಹಗಳು, ಘಟನೆಗಳ ಸುಂದರ ಹೆಣಿಗೆ, ಹೊಸ ಹಾಗೂ ಹಳೆಯ ಆದರ್ಶಗಳ ಸುಂದರ ಸಮ್ಮಿಳನ–ಇವು ಈ ಕಾವ್ಯದ ವೈಶಿಷ್ಟ್ಯಗಳು.

ತಮಿಳಿನ 'ಶಿಲಪ್ಪದಿಕಾರಮ್' ಕಾವ್ಯದಲ್ಲಿ ಒಂದು ನೂಪುರವು ದುರ್ಘಟನೆಗೆ ಕಾರಣವಾಗುವಂತೆ, ಶೇಕ್ಸ್‌ಪಿಯರನ 'ಒಥೆಲ್ಲೊ' ನಾಟಕದಲ್ಲಿ ಕೈವಸ್ತ್ರವೊಂದು ದುರ್ಘಟನೆಗೆ ಕಾರಣವಾದಂತೆ ಈ ಕಾವ್ಯದಲ್ಲಿ ಒಂದು ರಹಸ್ಯಪತ್ರದ ಸುತ್ತಲೂ ಕಥಾವಸ್ತು ಹೆಣೆದುಕೊಂಡಿದೆ.

ಉದಾತ್ತ ಆದರ್ಶಗಳನ್ನು ಹೊತ್ತ ಮಾಧವನ್ ಎಂಬ ಯುವಕನನ್ನು ಕಥಾನಾಯಕನನ್ನಾಗಿ ಪರಿಚಯಿಸುತ್ತಾರೆ. ಅವನಿಗೆ ಪ್ರೇಮವೇ ಸೌಂದರ್ಯ. ದೇವರೇ ಪ್ರೇಮ. ಕಮಲಮ್ ಎಂಬ ಯುವತಿಯಲ್ಲಿ ಅವನು ಪ್ರೀತಿಯ ಸೌಂದರ್ಯವನ್ನು ಕಾಣುತ್ತಾನೆ, ಅವಳನ್ನು ಮದುವೆಯಾಗುತ್ತಾನೆ. ಕಮಲೆಯು ಒಬ್ಬ ಸುಸಂಸ್ಕೃತ ಯುವತಿ. ಸಂಗೀತ, ಚಿತ್ರಕಲೆ ಮುಂತಾದವುಗಳಲ್ಲಿ ಪರಿಣತಿ ಪಡೆದಿದ್ದ ಅವಳು ಸಹಜವಾಗಿಯೆ ತನಗೆ ವೀಣೆಯನ್ನು ಕಲಿಸುತ್ತಿದ್ದ ರಾಘವನೊಡನೆ ಸ್ನೇಹ ಬೆಳೆಸುತ್ತಾಳೆ. ಜೊತೆಯಲ್ಲಿ ವೀಣೆ ನುಡಿಸುವುದು, ಓಡಾಡುವುದು ಹೀಗಾಗಿ ಪರಸ್ಪರ ಮೆಚ್ಚುಗೆ ಪಡೆಯುತ್ತಾರೆ. ಶಂಕರನ್ ಮಾಧವನ ಮತ್ತೊಬ್ಬ ಸ್ನೇಹಿತ. ಲಲಿತಕಲೆಗಳ ಬಗೆಗೆ ಅನಾದರ ತೋರಿಸುವ ಒಬ್ಬ ವಿಚಾರಶೂನ್ಯ ವ್ಯಕ್ತಿ. ಅವನ ಹೆಂಡತಿ ಶಾರದೆ ಉತ್ತಮ ನೃತ್ಯ ಕಲಾವಿದೆ; ಸ್ಫುರದ್ರೂಪಿಯೂ ಹೌದು. ಪ್ರೀತಿ ಮತ್ತು ಸೌಂದರ್ಯದ ಆರಾಧಕನಾದ ಮಾಧವನು ಅವಳ ಪ್ರತಿಭೆಯನ್ನು ಕೊಂಡಾಡುತ್ತಾನೆ. ಅವರಿಬ್ಬರೂ ನಿಕಟ ಸ್ನೇಹಿತರಾಗುತ್ತಾರೆ. ಅವಳು ಅವನಿಗೆ ನೃತ್ಯವನ್ನು ಕಲಿಸುತ್ತಾಳೆ. ಧಾರಾಳ ಮನಸ್ಕರಾಗಿ ಅವರಿಬ್ಬರೂ ಶಂಕರನ ಎದುರಿನಲ್ಲಿಯೇ ನೃತ್ಯವನ್ನಾಡುತ್ತಾರೆ. ಶಾರದೆಯ ನಿಷ್ಕಳಂಕ ಪ್ರೀತಿಯನ್ನು ಭೋಗಾಪೇಕ್ಷೆಯೆಂದು ಮಾಧವನು ಅಪಾರ್ಥ ಮಾಡಿಕೊಳ್ಳುತ್ತಾನೆ. ಅಂತೆಯೇ ರಾಘವನು ಕಮಲಳ ಆತ್ಮಸಂತೋಷದ ಹೊಗಳಿಕೆ ಮಾತುಗಳನ್ನು ಕಾಮಾಸಕ್ತಿಯೆಂದು ಅಪಾರ್ಥ ಮಾಡಿಕೊಳ್ಳುತ್ತಾನೆ. ಒಂದು ದಿನ ಜೊತೆಯಲ್ಲಿ ವೀಣೆ ನುಡಿಸುತ್ತಿರುವಾಗ ರಾಘವನು ಕಮಲಳ ಜೊತೆಯಲ್ಲಿ ಅನುಚಿತ

ವಾಗಿ ವರ್ತಿಸುತ್ತಾನೆ. ಕಮಲೆಯು ಅವನ ವರ್ತನೆಯನ್ನು ಖಂಡಿಸುತ್ತಾಳೆ. ಸ್ನೇಹಿತನೊಬ್ಬನ ಮಡದಿಯೊಡನೆ ಇಂತಹ ದುರ್ವರ್ತನೆ ಸಲ್ಲದೆಂದು ಅವಳು ಅವನಿಗೆ ಬುದ್ಧಿವಾದ ಹೇಳುತ್ತಾಳೆ.

ಕ್ಷೋಭೆಗೊಂಡ ರಾಘವನು ಅಲ್ಲಿಂದ ಹೊರಬರುತ್ತಾನೆ. ಅದೇ ದಿನ ಮಾಧವನು ಶಾರದೆಯೊಡನೆ ಅಸಭ್ಯವಾಗಿ ವರ್ತಿಸಿ ಅವಳಿಂದ ಅವಮಾನಿತನಾಗುತ್ತಾನೆ. ನಿರಾಶೆಯಿಂದ ಮಾಧವನು ಮನೆಗೆ ಹಿಂತಿರುಗುವ ಅದೇ ವೇಳೆಗೆ ಸರಿಯಾಗಿ ರಾಘವನು ವ್ಯಾಕುಲತೆಯಿಂದ ಕೊಠಡಿಯ ಹೊರಗೆ ಬರುತ್ತಿರುವುದನ್ನು ನೋಡುತ್ತಾನೆ. ಕೂಡಲೆ ತನ್ನ ಹೆಂಡತಿ ಮತ್ತು ರಾಘವನ ಮಧ್ಯೆ ತಪ್ಪು ಸಂಬಂಧ ಕಲ್ಪನೆ ಮಾಡುತ್ತಾನೆ. ಕಮಲಳ ಶೀಲದ ಬಗೆಗೆ ಅವನು ಶಂಕಿತನಾಗುತ್ತಾನೆ. ಮಾರನೆಯ ದಿನ ರಾಘವನು ಬರೆದ ಪತ್ರವೊಂದನ್ನು ಸೇವಕಿಯು ಕಮಲಳಿಗೆ ತಂದುಕೊಟ್ಟಾಗ ಆ ಶಂಕೆಗೆ ಮತ್ತಷ್ಟು ಪುಷ್ಟಿ ದೊರೆಯುತ್ತದೆ. ಪತ್ರ ಯಾವುದೆಂದು ಕಮಲಳನ್ನು ಪ್ರಶ್ನಿಸಿದಾಗ ಅವಳು ವಿಷಯವನ್ನು ಮರೆಮಾಚುತ್ತಾಳೆ. ಅದೊಂದು ರಹಸ್ಯ ಪತ್ರವೆನ್ನುತ್ತಾಳೆ. ನಂತರ ಮಾಧವನು ಹೆಂಡತಿಯನ್ನು ಮಗುವನ್ನು ಉದಾಸೀನ ಮಾಡಲು ತೊಡಗುತ್ತಾನೆ. ಅವಳ ಕಳಂಕ ಶೀಲದ ಬಗೆಗೆ ಒಂದು ದಿನ ಬಹಿರಂಗವಾಗಿ ಹೇಳುತ್ತಾನೆ. ಇದರಿಂದ ನೊಂದು ಅದೇ ರಾತ್ರಿ ಮನೆಬಿಟ್ಟು ಹೊರಟ ಕಮಲಳು ಸಮೀಪದ ನದಿಯಲ್ಲಿ ಬಿದ್ದು ಆತ್ಮಹತ್ಯೆಗೆ ಪ್ರಯತ್ನಿಸುತ್ತಾಳೆ. ಅದಕ್ಕೆ ಮುಂಚೆ ಮಗುವನ್ನು ದಡದಲ್ಲಿದ್ದ ಬಂಡೆಯ ಮೇಲೆ ನಿಂತು ನೀರಿಗೆಸೆಯುತ್ತಾಳೆ. ಇನ್ನೇನು ತಾನೂ ನದಿಗೆ ಬೀಳಬೇಕೆನ್ನುವ ಸಮಯಕ್ಕೆ ಸರಿಯಾಗಿ ಭಯಾನಕ ಗಂಡು ಧ್ವನಿ ಕೇಳಿಸುತ್ತದೆ. ಇದನ್ನು ಕೇಳಿ ಅಲ್ಲಿಂದ ಓಡುತ್ತಾಳೆ. ನಂತರ ನದಿಗೆ ಧುಮುಕುತ್ತಾಳೆ. ನದಿ ನೀರು ಹೆಚ್ಚು ಆಳವಿಲ್ಲದ ಕಾರಣ ಅಲ್ಲಿ ತಾನಾಗಿ ಮುಳುಗಲಾಗಲಿಲ್ಲ. ಮಾರನೆಯ ದಿನ ಪ್ರಜ್ಞಾಶೂನ್ಯಳಾಗಿ ದಡಕ್ಕೆ ಬಂದು ಬೀಳುತ್ತಾಳೆ. ಮೀನುಗಾರರು ಅವಳನ್ನು ರಕ್ಷಿಸುತ್ತಾರೆ. ಅದೃಷ್ಟವಶಾತ್ ಮಗುವು ಸಹ ಬದುಕಿರುತ್ತದೆ. ಲಂಗರು ಹಾಕಿದ್ದ ದೋಣಿಯಲ್ಲಿ ಬಿದ್ದ ಮಗುವನ್ನು ದೋಣಿಯವರು ರಕ್ಷಿಸುತ್ತಾರೆ. ಅನಂತರ ಆ ಮಗುವನ್ನು ಮದರಾಸಿನ ಶ್ರೀಮಂತ ಮುದಲಿಯಾರರೊಬ್ಬರು ದತ್ತು ಪಡೆಯುತ್ತಾರೆ. ಕಮಲೆಯು ಮದರಾಸಿಗೆ ಹೋಗಿ ಶಾಲೆಯೊಂದರಲ್ಲಿ ಶಿಕ್ಷಕಿಯಾಗಿದ್ದ ತನ್ನ ಸಹಪಾಠಿ ಸರಸ್ವತಿಯ ಜೊತೆಯಲ್ಲಿ ತಂಗಿರುತ್ತಾಳೆ. ತನ್ನ ಒಡವೆಗಳು ಹಾಗೂ ರಾಘವನು ಬರೆದಿದ್ದ ಆ ರಹಸ್ಯ ಪತ್ರವೂ ಇದ್ದ ಗಂಟೊಂದನ್ನು ತನ್ನ ಸ್ನೇಹಿತೆ ಸರಸ್ವತಿಯ ವಶಕ್ಕೆ ಕೊಡುತ್ತಾಳೆ.

ಕಮಲೆಯು ಹಠಾತ್ತನೆ ಕಾಣೆಯಾದ ಸುದ್ದಿಯನ್ನು ತಿಳಿದ ರಾಘವನು ತನ್ನ ಅಸಭ್ಯ ವರ್ತನೆಯಿಂದಲೇ ಇಂತಹ ಪರಿಸ್ಥಿತಿ ಉಂಟಾಯಿತು ಎಂದು ತಿಳಿದು ಅವಳನ್ನು ಹುಡುಕಲು ತೊಡಗುತ್ತಾನೆ. ನದಿಯನ್ನು ದಾಟುವಾಗ ಕಮಲೆ ಮತ್ತು ಅವಳ ಮಗು ಮದರಾಸಿನಲ್ಲಿರುವ ವರ್ತಮಾನ ದೋಣಿಯವನ ಮೂಲಕ ತಿಳಿಯುತ್ತದೆ. ಮದರಾಸಿನ ರಾಮಕೃಷ್ಣಾಶ್ರಮದಲ್ಲಿ ಅನ್ನಸುಂದರ್ ಎಂಬ ಹೆಸರಿನಲ್ಲಿ ಸನ್ಯಾಸಿಯಾಗಿ ಸೇರುತ್ತಾನೆ.

ಅಲ್ಲಿ ಗ್ರಂಥಪಾಲಕನಾಗಿ ಕೆಲಸ ಮಾಡುವಾಗ ಸರಸ್ವತಿಯ ಮೂಲಕ ಕಮಲೆಯ ಬಗೆಗೆ ಸುಳಿವು ದೊರೆಯುತ್ತದೆ. ಗ್ರಂಥಾಲಯಕ್ಕೆ ಸದಾ ಬಂದು ಹೋಗುತ್ತಿದ್ದ ಸರಸ್ವತಿ ಕಮಲೆಯು ಒಂದು ಮಗುವನ್ನು ಕಳೆದುಕೊಂಡು ಸದಾ ಗೋಳಾಡುತ್ತಿರುವ ವಿಚಾರ ತಿಳಿಸುತ್ತಾಳೆ. ಕೂಡಲೆ ಕಮಲೆಗೆ ಒಂದು ಅನಾಮಧೇಯ ಪತ್ರವೊಂದನ್ನು ಬರೆದು ಅವಳ ಮಗು ತನ್ನೊಡನೆ ಸಂಭ್ರಮವಾಗಿರುವುದೆಂದು ತಿಳಿಸುತ್ತಾನೆ. ಈ ಮಧ್ಯೆ ಶ್ರೀಮಂತ ಲಾಯರೊಬ್ಬರ ಅತ್ಯಾಚಾರದಿಂದ ಅವಳನ್ನು ಪಾರು ಮಾಡುತ್ತಾನೆ. ಆ ಲಾಯರನ ಮಗಳಿಗೆ ಕಮಲೆಯು ವೀಣೆಯ ಪಾಠವನ್ನು ಕಲಿಸುತ್ತಾಳೆ.

ಮಾಧವನಿಗೆ ಜೀವನದಲ್ಲಿ ತೀರಾ ಜಿಗುಪ್ಸೆಯುಂಟಾಗಿ ಮನೆಬಿಟ್ಟು ಮದರಾಸನ್ನು ಸೇರುತ್ತಾನೆ. ಅಲ್ಲಿ ಒಂದು ಸಿನಿಮಾ ಸ್ಟುಡಿಯೋ ಪ್ರಾರಂಭಿಸುತ್ತಾನೆ. ಮೀನಾಕ್ಷಿ ಸುಂದರಮ್ ಎಂಬ ಸ್ತ್ರೀಲೋಲನೂ ನೀತಿಬಾಹಿರನೂ ಅಲ್ಲಿ ನಿರ್ದೇಶಕನಾಗಿ ಕೆಲಸ ಮಾಡುತ್ತಿರುತ್ತಾನೆ. ಸರಸ್ವತಿಯ ಶಾಲೆಯಲ್ಲಿ ಸಿನಿಮಾ ಷೂಟಿಂಗ್ ನಡೆಯುವಾಗ ಕಮಲೆಯನ್ನು ಕಂಡ ಮೀನಾಕ್ಷಿ ಸುಂದರಮ್ ಹೇಗಾದರೂ ಮಾಡಿ ಅವಳನ್ನು ತನ್ನ ಬಲೆಗೆ ಬೀಳಿಸಿಕೊಳ್ಳಬೇಕೆಂದು ತೀರ್ಮಾನಿಸುತ್ತಾನೆ. ಸರಸ್ವತಿಗೆ ತುಂಬಾ ಆಪ್ತನಂತೆ, ಹಿತೈಷಿಯಂತೆ ವರ್ತಿಸಿ ಶಾಲೆಗೆ ಸಾಕಷ್ಟು ಹಣವನ್ನು ವಂತಿಗೆ ನೀಡುತ್ತಾನೆ. ತಾನು ತೆಗೆಯುತ್ತಿರುವ ಒಂದು ಚಿತ್ರದಲ್ಲಿ ಸರಸ್ವತಿಯನ್ನು ಕಾಣಿಸಲು ಅವಳ ಮನ ಒಲಿಸುತ್ತಾನೆ. ಅನಂತರ ವೀಣಾವಾದನ ದೃಶ್ಯದಲ್ಲಿ ಕಮಲಳನ್ನು ಸೇರಿಸುವಂತೆ ಒತ್ತಾಯಿಸುತ್ತಾನೆ. ಚಿತ್ರೀಕರಣಕ್ಕೆ ಸ್ಟುಡಿಯೋವಿಗೆ ಕಳುಹಿಸಲು ಹೇಳದೆ ತನ್ನ ಮನೆಗೆ ಬರುವಂತೆ ಹೇಳುತ್ತಾನೆ. ಅಲ್ಲಿ ಅವಳ ಮಾನಾಪಹರಣ ಮಾಡಲು ಪ್ರಯತ್ನಿಸುತ್ತಾನೆ. ಪ್ರತಿಭಟಿಸಿ ನಿಂತ ಕಮಲೆಯು ಪ್ರಜ್ಞಾಶೂನ್ಯಳಾಗಿ ಬೀಳುತ್ತಾಳೆ. ಇಲ್ಲಿ ಮತ್ತೆ ಅವಳಿಗೆ ಅನ್ಬನಂದರ ರಕ್ಷಣೆ ದೊರೆಯುತ್ತದೆ.

ಸರಸ್ವತಿ, ಅನ್ಬನಂದರು ಸೇರಿ ಸ್ಟುಡಿಯೋ ಮಾಲೀಕ ಮಾಧವನಿಗೆ ನಿರ್ದೇಶಕ ಮೀನಾಕ್ಷಿ ಸುಂದರಮ್ ಇರುವ ಮನೆಗೆ ಭೇಟಿಕೊಡುವಂತೆ ಒಂದು ಪತ್ರ ಬರೆಯುತ್ತಾರೆ. ಮಾಧವನು ಅಲ್ಲಿ ಬಂದು ನೋಡಿದಾಗ ಆಶ್ಚರ್ಯ ಕಾದಿತ್ತು. ತನ್ನ ಮಡದಿ ಕಮಲೆ ಪ್ರಜ್ಞಾಹೀನಳಾಗಿ ಮಲಗಿದ್ದಾಳೆ. ಕೂಡಲೆ ಆಸ್ಪತ್ರೆಗೆ ಕರೆದೊಯ್ದು ಉಪಚರಿಸುತ್ತಾರೆ. ಸರಸ್ವತಿ, ಅನ್ಬನಂದರು ಮಾಧವನಿಗೆ ಮೀನಾಕ್ಷಿ ಸುಂದರಮ್ ಮಾಡಿದ ಆ ಕೃತ್ಯದ ವಿಚಾರವನ್ನು ತಿಳಿಸುತ್ತಾರೆ. ಕಮಲೆಯು ಮನೆಯಿಂದ ಕಾಣದಾದಾಗಿನಿಂದ ಪ್ರಾರಂಭಿಸಿ ಎಲ್ಲಾ ವಿಷಯವನ್ನು ಸರಸ್ವತಿ ವಿವರಿಸುತ್ತಾಳೆ. ಗೆಳತಿ ತನ್ನಲ್ಲಿಟ್ಟಿದ್ದ ಗಂಟನ್ನು ಮಾಧವನಿಗೆ ಒಪ್ಪಿಸುತ್ತಾಳೆ. ಅದರಲ್ಲಿದ್ದ ರಾಘವನ ಪತ್ರ ಓದಿ ಕಮಲಳ ಶೀಲದ ಬಗೆಗೆ ಮಾಧವನಿಗೆ ಉಂಟಾಗಿದ್ದ ಎಲ್ಲಾ ಅನುಮಾನ ಪರಿಹಾರವಾಗುತ್ತದೆ. ಅವಳನ್ನು ಮನಸಾರೆ ಪ್ರೀತಿಸಲು ತೊಡಗುತ್ತಾನೆ. ಸರಸ್ವತಿಯ ಸಹಾಯ ಪಡೆದು ಅನ್ಬನಂದರ್ ಕಮಲಳ ಮಗುವನ್ನು ಪತ್ತೆಮಾಡುತ್ತಾನೆ. ಸರಸ್ವತಿಯು ತನ್ನ ಶಾಲೆಯಲ್ಲಿ ಒಂದು ಔತಣಕೂಟವನ್ನೇರ್ಪಡಿಸಿ ಅಲ್ಲಿಗೆ ಅನ್ಬನಂದರ್,

ಶಾರದ ಹಾಗೂ ಶಂಕರನನ್ನು ಆಹ್ವಾನಿಸುತ್ತಾಳೆ. ಆ ಕೂಟದಲ್ಲಿ ಕಮಲಳು ವೀಣೆ ನುಡಿಸುತ್ತಾಳೆ. ಅದರಲ್ಲಿ ಅಸ್ವನಂದರ್ ತಪ್ಪು ಹುಡುಕಿ ಮತ್ತೆ ಸರಿಪಡಿಸುತ್ತಾರೆ. ಅಸ್ವನಂದರು ರಾಘವನೆಂಬ ವಿಚಾರ ಆಗ ಕಮಲಳಿಗೆ ಸ್ಪಷ್ಟವಾಗುತ್ತದೆ. ತಾನು ಸನ್ಯಾಸಿ ಆದದ್ದು ಹೇಗೆ, ಏಕೆ ಎಂಬ ವಿವರಗಳನ್ನು ತಿಳಿಸಿದ ರಾಘವನು ಹೇಗೆ ತಾನು ಎರಡು ಮೂರು ಸಂದರ್ಭಗಳಲ್ಲಿ ಕಮಲಳ ಮಾನವನ್ನು ಕಾಪಾಡಿದೆನೆಂದು ತಿಳಿಸು ತ್ತಾನೆ. ರಾಘವನು ಕ್ಷಮೆ ಕೋರಿ ತಾನು ಕಮಲಳಿಗೆ ಬರೆದಿದ್ದ ರಹಸ್ಯಪತ್ರವನ್ನು ಮಾಧವನು ತಾನೇ ಕೈಯಾರೆ ರಾಘವನಿಗೆ ಕೊಡುತ್ತಾನೆ. ಆ ಪತ್ರ ತನ್ನ ಮತ್ತು ಕಮಲಳ ಜೀವನದಲ್ಲಿ ಹೇಗೆ ದುರಂತವನ್ನುಂಟುಮಾಡಿತು ಎಂಬುದನ್ನು ನೆನಪು ಮಾಡಿ ಕೊಳ್ಳುತ್ತಾರೆ, ಶಾರದೆಯು ವಿಚಾರದಲ್ಲಿ ತನ್ನ ಸ್ನೇಹಿತನ ವರ್ತನೆಯನ್ನು ತಾನು ಹೇಗೆ ಹಗುರವಾಗಿ ಪರಿಗಣಿಸಿದೆನೆಂದು ಶಂಕರನು ಮಾಧವನಿಗೆ ಹೇಳಿ ಅಹಿತ ಘಟನೆ ಗಳನ್ನು ಮರೆಯುವಂತೆ ಕೇಳಿಕೊಳ್ಳುತ್ತಾನೆ. ಮಾಧವನ ಮನಸ್ಸಿನ ಮೇಲೆ ಮುಸುಕಿದ್ದ ಮುಜಸ್ಸು ಹೀಗೆ ತೊಡೆದುಹಾಕಲಾಯಿತು. ಔತಣಕ್ಕೆ ಬಂದಿದ್ದ ಮುದಲಿಯಾರರು ತಮ್ಮ ಸಾಕುಮಗುವನ್ನು ಅವರ ತಂದೆತಾಯಿಗೆ ಒಪ್ಪಿಸಿದರು. ಒಂದು ಪತ್ರದಿಂದ ಬಿರುಕು ಬಿಟ್ಟಿದ್ದ ಸಂಸಾರ ಮತ್ತೆ ಒಂದುಗೂಡಿತು.

ಅಲ್ಪ ವಿಷಯದಲ್ಲಿ ಗಂಡಹೆಂಡಿರ ಮಧ್ಯೆ ಉಂಟಾದ ವಿರಸ ಹೇಗೆ ಹಾವಳಿ ಯನ್ನುಂಟುಮಾಡಿ ಕೊನೆಗೆ ಎಲ್ಲವೂ ಸುಖಾಂತವಾಯಿತು ಎಂಬುದನ್ನು ಈ ಕತೆ ವಿವರಿಸು ತ್ತದೆ. ಅಲ್ಲದೆ ಗಂಡಸರು ಹೇಗೆ ನಿರಪರಾಧಿ ಹೆಂಗಸರು ತೋರಿಸುವ ಪ್ರೀತಿಯನ್ನು ಕಾಮಾಸಕ್ತಿಯಿಂದ ಅಪಾರ್ಥಮಾಡಿಕೊಂಡು ಅವರನ್ನು ಅಸಭ್ಯತೆಯಿಂದ ಕಾಣುತ್ತಾರೆ ಎಂಬುದನ್ನು ಚಿತ್ರಿಸಿದ್ದಾರೆ. ಭಾರತೀಯ ಸ್ತ್ರೀ ಹೇಗೆ ಸಮಯಬಂದಾಗ ತನ್ನ ಶೀಲವನ್ನು ಕಾಪಾಡಿಕೊಳ್ಳುವುದಲ್ಲದೆ ಅಸಭ್ಯತೆಯಿಂದ ನಡೆದುಕೊಂಡ ಸ್ನೇಹಿತರ ಮರ್ಯಾದೆಯನ್ನು ಉಳಿಸುತ್ತಾರೆ ಎಂಬುದನ್ನು ಕತೆಯಲ್ಲಿ ಎತ್ತಿಹಿಡಿಯುತ್ತಾರೆ. ಭಾರತೀಯ ನಾರಿಯ ಉದಾತ್ತ ಗುಣಗಳನ್ನು ಹಾಗೂ ಪ್ರಾಮಾಣಿಕ ಪ್ರೀತಿಯಿಂದ ಕಾಮಾಂಧತೆಯನ್ನು ಗೆಲ್ಲುವ ಮಾರ್ಗವನ್ನು ಸಮರ್ಥಿಸಲಾಗಿದೆ.

ಕತೆಯಲ್ಲಿ ಮುಖ್ಯವಾದ ರಹಸ್ಯವನ್ನು ಕೊನೆಯವರೆಗೂ ಸಂದೇಹವಾಗಿಯೇ ಉಳಿಸಿಕೊಳ್ಳಲಾಗಿದೆ. ರಾಘವನು ಕಮಲಳಿಗೆ ಬರೆದ ಪತ್ರ, ಅಸ್ವನಂದರು ಯಾರು ಎಂಬ ರಹಸ್ಯ ಎಲ್ಲವೂ ಕೊನೆಯವರೆಗೂ ಇತರ ಕಥಾ ಪಾತ್ರಗಳಿಗೆ ತಿಳಿಯುವುದಿಲ್ಲ.

ಕಥೆಯಲ್ಲಿ ಬರುವ ಎಲ್ಲಾ ಪಾತ್ರಗಳು ಸಾಮಾನ್ಯ ವ್ಯಕ್ತಿಗಳು ; ನಾವು ದಿನನಿತ್ಯ ಭೇಟಿಮಾಡುವಂತಹ ಜನ ; ಸ್ವಾಭಾವಿಕವಾಗಿ ಎಲ್ಲರಲ್ಲೂ ಕಂಡುಬರುವಂತಹ ದೌರ್ಬಲ್ಯಗಳು, ಕೆಲವರಲ್ಲಿ ಮಾತ್ರ ಕಂಡುಬರುವ ಉದಾತ್ತ ಗುಣಗಳುಳ್ಳ ವ್ಯಕ್ತಿಗಳು. ಮಾಧವ ಹಾಗೂ ಕಮಲಳ ಪಾತ್ರಗಳನ್ನು ಚಿತ್ರಿಸುವಾಗ ಲೇಖಕರ ಮೇಲೆ ಆಧುನಿಕ ಸಾಮಾಜಿಕ ಸುಧಾರಕರ ಪ್ರಭಾವವುಂಟಾಗಿರುವುದನ್ನು ಕಾಣಬಹುದು, ಮಾಧವನನ್ನು

ಗುಲಾಮತನ, ದೈವಾಧೀನತೆ, ಕಳ್ಳತನ, ಕುಡುಕತನ, ಜಾತೀಯತೆ ಮುಂತಾದವುಗಳನ್ನು ಪ್ರತಿಭಟಿಸಿ ನಿಂತ ಉನ್ನತ ಆದರ್ಶಗಳನ್ನು ಹೊಂದಿರುವ ಯುವ ದೇಶಭಕ್ತನನ್ನಾಗಿಯೂ ಸಮಾಜದಲ್ಲಿ ಹೊಸ ಸಂಧಾರಣೆಗಳನ್ನು ತರುವವರ ಪ್ರತಿನಿಧಿಯಾಗಿ ಚಿತ್ರಿಸಲಾಗಿದೆ.

ನಾಯಕ ನಾಯಕಿಯರ ರೂಪವನ್ನು, ಸೌಂದರ್ಯವನ್ನು ವಿವರಿಸುವಾಗ ರೂಢಿಯಾಗಿ ವರ್ಣಿಸುವ ವರ್ಣನೆ ಏನೇನೂ ಸಾಲದೆಂದು ಅದು ಪರಿಪೂರ್ಣವಾದ ಸೌಂದರ್ಯವೆಂದೂ ಅವರು ಹೇಳುತ್ತಾರೆ. ಕಮಲಳ ಬಗೆಗೆ ಅವರು ನೀಡುವ ವರ್ಣನೆ:

'ಜಿಂಕೆ' ಎನ್ನೋಣವೆ ?
ಅವಳಿಗೆ ಅಂಜಿಕೆಯಿಲ್ಲ,
ಕಣ್ಣುಗಳನ್ನು ಮೀನಿಗೆ ಹೋಲಿಸಬಹುದೆ ?
ಮೀನು ಅಷ್ಟು ಕಪ್ಪಗಿಲ್ಲ
ಮಾತಿನ ಸವಿ ಜೇನುತುಪ್ಪಕ್ಕೆ ಸಮವೆ ?
ಹಾಗಿಲ್ಲ ; ಜೇನುತುಪ್ಪ ಎಗಟು
ಹಣೆಯನ್ನು ಅರ್ಧಚಂದ್ರನಿಗೆ ಹೋಲಿಸಬಹುದೆ ?
ಹಾಗಿಲ್ಲ ; ಉಳಿದ ಭಾಗದ ಮುಖ ಬೆಳಕಿಲ್ಲದಾಗುವುದು
ಅವಳನ್ನು ನವಿಲಿಗೂ ಹೋಲಿಸುವಂತಿಲ್ಲ
ಹೆಣ್ಣು ನವಿಲಿಗೆ ಸುಂದರ ಗರಿಗಳಿಲ್ಲ
ಕೋಗಿಲೆಯ ಕಂಠವೆನ್ನೋಣವೆ ?
ಕೋಗಿಲೆಗೆ ಸಪ್ತಸ್ವರಗಳಿಲ್ಲ
ಮೈಬಣ್ಣ ಸೂರ್ಯನ ಪ್ರಭೆಯೆ ?
ಹಾಗಿಲ್ಲ ; ಸೂರ್ಯನು ತೀರಾ ಬಿಸಿ
ಕುಡಿನೋಟ ಭರ್ಜಿಯಂತಿದೆಯೆ ?
ಹಾಗಿಲ್ಲ ; ವಿನಾಶವೆ ಅದರ ಗುರಿ, ಒಳಿತಲ್ಲ.

ಕತೆಯ ನಿರೂಪಣೆಯಲ್ಲಿ ಅನೇಕ ಉಪಮೆಗಳನ್ನು ಬಳಸಿಕೊಳ್ಳಲಾಗಿದೆ. ಕೆಲವು ಸ್ವಾತಂತ್ರ್ಯ ಹೋರಾಟಗಾರರ ಪ್ರಭಾವ ಲೇಖಕರ ಮೇಲೆ ಬೀರಿರುವುದು ಸ್ಪಷ್ಟವಾಗುತ್ತದೆ. ಉದಾಹರಣೆಗೆ ಮಾಧವನು ಕಮಲಳನ್ನು ಮಾಳಿಗೆಯ ಮೇಲ್‌ಭೇಟಿ ಮಾಡುವಾಗ ಅವನಿಗಾದ ಅನುಭವವನ್ನು ಪ್ರತ್ಯೇಕವಾಗಿ ಅಂಜಿಕೆಯನ್ನು ವಿದೇಶೀಯರ ಅಧೀನದಲ್ಲಿರುವ ಗುಲಾಮನ ಹೆದರಿಕೆಗೆ ಹೋಲಿಸಲಾಗಿದೆ. ಮೆಟ್ಟಿಲಿಳಿದು ಬರುವಾಗ ಅವನಿಗಾಗುವ ಸಂತೋಷವನ್ನು ಸರ್ವ ಸ್ವತಂತ್ರ ದೇಶದ ಒಬ್ಬ ಪೌರನು ಅನುಭವಿಸುವ ಸಂತೋಷಕ್ಕೆ ಹೋಲಿಸಲಾಗಿದೆ. ಕಮಲಳು ತನ್ನ ಪ್ರಿಯನೊಡನೆ ಭೇಟಿಯಾದ

ನಂತರ ಅನುಭವಿಸುವ ಆನಂದೋತ್ಸಾಹವನ್ನು ಸಹ ಹಾಗೆಯೇ ಪರಾಧೀನತೆಯಿಂದ ಬಿಡುಗಡೆ ಹೊಂದಿದ ಒಬ್ಬ ಗುಲಾಮನು ಅನುಭವಿಸುವ ಆನಂದಕ್ಕೆ ಹೋಲಿಸಲಾಗಿದೆ. ಮಾಧವನು ತನ್ನ ಪ್ರೇಯಸಿಯನ್ನು ಮೊಟ್ಟಮೊದಲು ಭೇಟಿಯಾದಾಗ ಉಂಟಾಗುವ ಹೃದಯಸ್ಪಂದನವನ್ನು ವಿನಾಕಾರಣ ವಿಶೇಷ ಕಾಯಿಂದೆ ಜಾರಿ ಮಾಡಿ ಶಿಕ್ಷೆಗೆ ಗುರಿಯಾದ ವ್ಯಕ್ತಿಯ ಹೃದಯ ಮಿಡಿತಕ್ಕೆ ಹೋಲಿಕೆ ನೀಡಲಾಗಿದೆ. ಕಂಬರಾಮಾಯಣ ಹಾಗೂ ತಿರುಕ್ಕುರಳ್ ಗ್ರಂಥಗಳು ಲೇಖಕರ ಉಪಮೆಗಳ ಮೇಲೆ ಅಲ್ಲಲ್ಲಿ ಪ್ರಭಾವ ಬೀರುವುದನ್ನು ಗಮನಿಸಬಹುದು. ಮಗುವಿನ ತೊದಲ್ನುಡಿ ವೀಣೆ ಮತ್ತು ಯಾಳ್ ವಾದ್ಯಗಳ ಮಿಶ್ರ ಸಂಗೀತದಂತೆ ಎಂದು ಹೇಳುವ ನುಡಿಗಳು ತಿರುಕ್ಕುರಳಿನವು. ಸರಸ್ವತಿಯು ಕಮಲೆಗೆ ಅವಳ ಮಗು ಸುಖವಾಗಿದೆ ಎಂದು ಹೇಳುವಾಗ, "ಕಂಡೆ ಕಮಲ ಕಂಡೆ" ಎಂದು ಹೇಳುವ ವಾಕ್ಯ, ಹನುಮಂತನು ರಾಮನಲ್ಲಿ ಬಂದು, "ಕಂಡೆ ಸೀತೆಯನ್ನು ಕಂಡೆ" ಎಂದು ಹೇಳುವ ವಾಕ್ಯವನ್ನು ಅನುಕರಿಸಲಾಗಿದೆ. ಬಹುಮಟ್ಟಿಗೆ ಎಲ್ಲಾ ಉಪಮಾನಗಳನ್ನು ಸಾಮಾನ್ಯ ಜೀವನದಿಂದ ಆಯ್ದುಕೊಳ್ಳಲಾಗಿದೆ. ಒಬ್ಬ ವ್ಯಕ್ತಿಯ ಆತಂಕವನ್ನು ಪರೀಕ್ಷೆಗೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ವಿದ್ಯಾರ್ಥಿಗಳ ಆತಂಕಕ್ಕೆ, ನ್ಯಾಯಾಲಯದ ತೀರ್ಪಿಗೆ ಎದುರು ನೋಡುತ್ತಿರುವ ಕಕ್ಷಿಗಾರರ ಆತಂಕಕ್ಕೆ ಹೋಲಿಸಲಾಗಿದೆ.

ಜನಸಾಮಾನ್ಯರು ವಿವಾದಗ್ರಸ್ತ ವಿಷಯಗಳ ಬಗೆಗೆ ಪಡುವ ತೊಂದರೆಗಳನ್ನು ಕುರಿತು ಲೇಖಕರು ತಮ್ಮ ಅಮೂಲ್ಯ ಅಭಿಪ್ರಾಯಗಳನ್ನು ನೀಡಿದ್ದಾರೆ. ಎದೆಗುಂದಿದ ತನ್ನ ಹೆಂಡತಿಗೆ ಶಂಕರನು ಸಮಾಧಾನಪಡಿಸುತ್ತಾ ನಿಜವಾದ ಪ್ರೇಮಕ್ಕೂ ಕಾಮಾಂಧತೆಗೂ ಇರುವ ವ್ಯತ್ಯಾಸವನ್ನು ವಿವರಿಸುತ್ತಾನೆ. ಕಾಮಾಸಕ್ತಿ ಎಂದರೆ ಬೇರೊಬ್ಬರ ದೇಹಕ್ಕಾಗಿ ಹಂಬಲಿಸುವುದು ; ಪ್ರೇಮವಾದರೆ ಇನ್ನೊಬ್ಬರ ಆತ್ಮಕ್ಕಾಗಿ ಮರುಗುವುದು. ಕಾಮಾಸಕ್ತಿಯು ದೈಹಿಕವಾದರೆ ಪ್ರೇಮಾಸಕ್ತಿ ದೈವಿಕ. ಕಾಮಾಸಕ್ತರು ತಮ್ಮ ಆಸೆ ಈಡೇರದಾದಾಗ ಕೋಪಗೊಳ್ಳುತ್ತಾರೆ. ಮಾತ್ರವಲ್ಲದೆ ಒರಟಾಗಿ ವರ್ತಿಸುತ್ತಾರೆ, ಕೋಲಾಹಲವುಂಟುಮಾಡುತ್ತಾರೆ. ಆದರೆ ಪ್ರೇಮಾಸಕ್ತರು ಹಾಗಲ್ಲ ; ಎಲ್ಲಾ ಸಂದರ್ಭಗಳಲ್ಲಿಯೂ ತಾವು ಪ್ರೀತಿಸುವ ವ್ಯಕ್ತಿಯನ್ನು ಪ್ರೀತಿಸುತ್ತಲೇ ಮುಂದುವರೆಯುತ್ತಾರೆ. ಪ್ರೀತಿಯು ಪ್ರೀತಿಸಿದವರಲ್ಲಿ ತಪ್ಪನ್ನು ಹುಡುಕುವುದಿಲ್ಲ ; ಅದು ತನ್ನ ಪ್ರೀತಿಪಾತ್ರರಿಗಾಗಿ ಎಲ್ಲವನ್ನೂ ತ್ಯಜಿಸಲು ಸಿದ್ಧವಾಗುತ್ತದೆ. ಅದು ದೇಹ ಮತ್ತು ಮನಸ್ಸುಗಳಿಂದ ಬೇರೆಯೇ ಆದ ಒಂದು ವಸ್ತು. ಆದರೆ ಕಾಮಾಸಕ್ತಿ ಹಾಗಲ್ಲ ; ಚಂಚಲ. ಒಂದರಿಂದ ಇನ್ನೊಂದಕ್ಕೆ ಹಾರುತ್ತಾ ಹೋಗುತ್ತದೆ. ಹಲವು ವರ್ಷಗಳಿಂದ ಬೆಳೆಸಿಕೊಂಡು ಬಂದಿರುವ ಸಚ್ಚಾರಿತ್ರ್ಯವನ್ನು ಇದು ಕೆಲವೇ ಕ್ಷಣಗಳಲ್ಲಿ ಹಾಳು ಮಾಡುತ್ತದೆ.

ಸಾಧಾರಣ ಮಾನವಪ್ರೇಮಕ್ಕೂ ದೈವಿಕ ಅನುಗ್ರಹಕ್ಕೂ ಇರುವ ವ್ಯತ್ಯಾಸವನ್ನು ಕುರಿತು ಅವರು ಹೇಳುವುದು : ಪ್ರೇಮವೆಂದರೆ ನಮ್ಮೊಡನೆ ಬಾಳುವ ಹೆಂಡತಿ,

ಮಕ್ಕಳು, ಸ್ನೇಹಿತರು, ಬಂಧು ಬಳಗ ಇವರೊಡನೆ ನಮಗಿರುವ ಮೋಹ. ಅನುಗ್ರಹವು ಎಲ್ಲವನ್ನೂ ಎಲ್ಲರನ್ನೂ ಸೆಳೆದುಕೊಳ್ಳುತ್ತದೆ; ಅದು ನಮ್ಮನ್ನು ಪ್ರೀತಿಸದವರನ್ನು ಅಷ್ಟೇಕೆ ನಮ್ಮ ಕಡುವಿರೋಧಿಗಳನ್ನೂ ಅಪ್ಪಿಕೊಳ್ಳುತ್ತದೆ.

ಸಾಮಾನ್ಯ ಕಲಿತನಕ್ಕೂ ಬೌದ್ಧಿಕ ಕಲಿತನಕ್ಕೂ ಇರುವ ಮುಖ್ಯ ವ್ಯತ್ಯಾಸಗಳನ್ನು ಕುರಿತು ಅವರು ಹೇಳುವುದು ಹೀಗೆ: ಸಾಮಾನ್ಯ ಕಲಿತನದಿಂದ ಕೂಡಿರುವ ವೀರರ ಗುಣ ತನ್ನವರಿಗಾಗಿ, ಕುಟುಂಬಕ್ಕಾಗಿ, ದೇಶಕ್ಕಾಗಿ ಯಾವುದೇ ತ್ಯಾಗವನ್ನು ಮಾಡಲು ಸದಾ ಸಿದ್ಧವಾಗಿರುತ್ತದೆ. ಪ್ರೀತಿಯ ನೆಲೆಗಟ್ಟಿನ ಮೇಲೆ ನಿಂತು ಅದು ಸನ್ಮಾರ್ಗದಲ್ಲಿಯೇ ವಿಜಯವನ್ನು ಸಾಧಿಸುತ್ತದೆ. ಆದರೆ ಧೀರ ಅಥವಾ ಬೌದ್ಧಿಕ ಕಲಿತನವು ಇದಾವುದರ ಬಂಧನವಿಲ್ಲದೆ ಮುನ್ನುಗ್ಗಿ ಇಡೀ ವಿಶ್ವವು ತನ್ನದೆಂದು ಭಾವಿಸುತ್ತದೆ. ಅಹಿಂಸೆಯ ತಳಹದಿಯಲ್ಲಿ ಬೆಳೆದ ಇದು ತಾನು ನಶಿಸಿದರೂ ತನ್ನತನವನ್ನು ಕಳೆದುಕೊಳ್ಳುವುದಿಲ್ಲ. ಇಂತಹ ಕಲಿಗಳಿಗೆ ಇಡೀ ವಿಶ್ವವು ಅಖಂಡ, ವಿಶ್ವದ ಒಳಿತು ಅವರ ಪರಮ ಗುರಿ. ಮಹಾತ್ಮರಿಗೆ ಮಾತ್ರ ಇಂತಹ ಕಲಿತನವನ್ನು ಸಾಧಿಸಲು ಸಾಧ್ಯವಾಗುತ್ತದೆ. ಸ್ವಾಮಿ ವಿವೇಕಾನಂದರನ್ನು ಒಬ್ಬ ವೀರರೆನ್ನುವುದಾದರೆ ಶ್ರೀರಾಮಕೃಷ್ಣರು ಒಬ್ಬ ಧೀರರು.

ವೈಜ್ಞಾನಿಕ ಬೆಳವಣಿಗೆಯ ಬಗೆಗೆ ಅವರು ವಾದವನ್ನು ಮುಂಡಿಸುತ್ತಾ, ಸಮಾಜದಲ್ಲಿ ಮೂಢನಂಬಿಕೆಗಳನ್ನು ತೊಡೆದುಹಾಕಿ ಜೀವನದಲ್ಲಿ ಹೊಸ ವಿಧಾನಗಳನ್ನು ಸುಧಾರಣೆಗಳನ್ನು ತರುವವರ ವಾದವನ್ನು ಅವರು ಒಪ್ಪುತ್ತಾರೆ. ಆದರೆ ಮೂಲಭೂತವಾದ ಶಾಶ್ವತ ಜೀವನ ಮೌಲ್ಯಗಳ ಬದಲಾವಣೆಗೆ ಅವರ ವಿರೋಧವಿದೆ. ಪ್ರತಿಯೊಬ್ಬನೂ ತನ್ನ ನೈತಿಕತೆಯನ್ನು ಕಾಪಾಡಿಕೊಂಡು ಸಮಾಜದ ಇತರ ಜೀವಿಗಳನ್ನು ತನ್ನ ಜೀವದಂತೆಯೇ ಪರಿಗಣಿಸಿ ಗೌರವಿಸಿದರೆ ಉಳಿದದ್ದನ್ನು ಸಾಮಾಜಿಕ ನೀತಿ ನಿಯಮಗಳು ರಕ್ಷಿಸಿಕೊಳ್ಳುತ್ತವೆ ಎನ್ನುತ್ತಾರೆ ಅವರು. ಆದರ್ಶ ರಾಜ್ಯದ ಕನಸನ್ನು ಅವರು ಕಂಡಿದ್ದರು :

"ರಾಜನೆಂಬ ವ್ಯಕ್ತಿಯಿಲ್ಲ – ಅಲ್ಲಿ
ಮಂತ್ರಿ ತಂತ್ರಿ ಯಾರೂ ಇಲ್ಲ
ಹೀನರಿಲ್ಲ ಈ ಸಮಾಜದಲ್ಲ
ಬಿರುದು, ಪದವಿ ಪಡೆವ
ದಾಹವಿಲ್ಲ ಯಾರಿಗು,

ಮುಂದುವರೆಯುತ್ತಾ ಅವರು, 'ಆ ದೇಶದಲ್ಲಿ ಇಂದಿನ ನ್ಯಾಯಾಲಯಗಳಂತಹ ವ್ಯವಸ್ಥೆಯೂ ಇಲ್ಲ. ಗ್ರಾಮ ಸಭೆಗಳಲ್ಲಿ ಎಲ್ಲಾ ವಿವಾದಗಳು ತೀರ್ಮಾನಿಸಲಾಗುತ್ತವೆ. ನ್ಯಾಯ ಪಡೆಯಲು ಹಣವ್ಯಯದ ಅಗತ್ಯವಿಲ್ಲ. ಇಲ್ಲಿರುವ ದೊಡ್ಡ ದೊಡ್ಡ ವಿದ್ಯಾಲಯ

ಗಳು ಅಲ್ಲಿರುವುದಿಲ್ಲ; ಮನೆ ಮನೆಯೂ ಶಾಲೆಯೇ ಆಗಿರುತ್ತದೆ. ಮದ್ಯದ ಅಂಗಡಿಗಳು, ಜೂಜಿನ ಕಟ್ಟೆಗಳು ಅಲ್ಲಿ ಕಾಣುವುದಿಲ್ಲ. ಅಲ್ಲಿನ ಭೂಮಿ ಒಬ್ಬೊಬ್ಬರ ಸ್ವತ್ತಲ್ಲ; ಎಲ್ಲರಿಗೂ ಸೇರಿದುದು. ಕ್ಷಾಮ, ಹಸಿವು, ನಿರುದ್ಯೋಗ ಇವೆಲ್ಲಾ ಅಲ್ಲಿ ಕಾಣುವುದಿಲ್ಲ. ಅಸ್ಪೃಶ್ಯತೆ, ಬಾಲ್ಯವಿವಾಹ, ವೈಧವ್ಯ, ಆರ್ಥಿಕ ಅಸಮಾನತೆ, ಧಾರ್ಮಿಕ ಅಸಹನೆ ಮುಂತಾದ ಸಾಮಾಜಿಕ ಪಿಡುಗುಗಳು ಅಲ್ಲಿರುವುದಿಲ್ಲ. ಅವರು ಕನಸು ಕಾಣುವುದು ಗಾಂಧಿಯ ರಾಮರಾಜ್ಯ ಅಥವಾ ಮೂರ್ ಅವರ ಉಟೋಪಿಯ.

ದೋಣಿ ನಡೆಸುವ ಒಬ್ಬ ಬಡಹೆಂಗಸು ಹಾಡುವ ಜೋಗುಳಗೀತೆಯ ಮೂಲಕ ಸಾಮಾಜಿಕ ಅನ್ಯಾಯವನ್ನು ಅವರು ಛೇಡಿಸುತ್ತಾರೆ:

ಅಧಿಕಾರವಿದೆಯೆಂದು
ಅನ್ಯಾಯ ಮಾಡಿಲ್ಲ
ವಂಚನೆಗೈಯುತ್ತ ಉಣಲಿಲ್ಲ
ಹೊಗಳುಭಟರಾಗಿ ಹುಸಿನುಡಿದು
ಅನುಕೂಲ ಪಡೆದವರು ನಾವಲ್ಲ
ಸುಳ್ಳು ಸಾಕ್ಷಿ ಕಟ್ಟುವುದು
ಪಿತೂರಿ ನಡೆಸುವುದು
ಇವೊಂದು ನಾವರಿಯೆವು
ಅನ್ಯಾಯದಿ ದಾನರೂಪದಲಿ
ಹಣವನು ಪಡೆವ ಕಲೆ ನಾವು ಕಲಿತಿಲ್ಲ
ಕೂಲಿ ನೀಡದೆ ದುಡಿಸುವ ರೀತಿಯು
ನಮಗರಿಯದು.

ಸತ್ಕಾವ್ಯದ ಬಗೆಗೆ ಅವರು ಹೀಗೆ ಹೇಳುತ್ತಾರೆ: ಅದು ಕಲ್ಪನಾಪೂರ್ಣವಾಗಿದ್ದು ಮಾನವನ ಸದ್ಗುಣಗಳನ್ನು ಎತ್ತಿಹಿಡಿಯುವ ಮೂಲೋದ್ದೇಶದಿಂದ ಕೂಡಿರಬೇಕೆನ್ನುತ್ತಾರೆ. ಕೇವಲ ಶಬ್ದಾಡಂಬರ ಕಾವ್ಯವಲ್ಲ; ಅದೇನಿದ್ದರೂ ಶಬ್ದಗಳ ಕಸರತ್ತಾಗುತ್ತದೆ ಅಷ್ಟೆ.

ಶ್ರೀ ರಾಮಕೃಷ್ಣರ ಚಳುವಳಿಯು ಜ್ಞಾನಾನಂದರು, ಅನ್ವನಂದರು ಮುಂತಾದವರ ನಿಸ್ವಾರ್ಥ ಸೇವೆಯನ್ನು ವರ್ಣಿಸುವಲ್ಲಿ ಕವಿವರ್ಯರ ಮೇಲೆ ಪ್ರಭಾವ ಬೀರಿದೆ. ಮೀನಾಕ್ಷಿ ಸುಂದರಮ್ ಪಾತ್ರದ ಮೂಲಕ ಚಲಚಿತ್ರ ಉದ್ಯಮದಲ್ಲಿ ನಡೆಯುವ ಅನೈತಿಕ ವ್ಯವಹಾರಗಳನ್ನು ಅವರು ಬಯಲಿಗೆಳೆಯುತ್ತಾರೆ. ತಮಿಳು ಸಂಗೀತ, ಭಾಷೆ ಹಾಗೂ ಚಿತ್ರಕಲೆ ಬಗೆಗೆ ಕವಿವರ್ಯರಿಗಿದ್ದ ಒಲವನ್ನು ಸಂದರ್ಭೋಚಿತವಾಗಿ ಸ್ಪಷ್ಟಪಡಿಸಿದ್ದಾರೆ.

ಈ ಕಿರುಕಾವ್ಯವನ್ನು ಕುರಿತ ಕಟು ಟೀಕೆಗಳು ಇಲ್ಲದಿಲ್ಲ. ಇದರ ಶೈಲಿ ಒಂದು ರೀತಿಯ ಕಲಸು ಮಣಿಪ್ರವಾಳ (ಸಂಸ್ಕೃತ, ಇಂಗ್ಲಿಷ್ ಕಲೆತ ತಮಿಳು) ಅಲ್ಲದೆ ಬಹುಮಟ್ಟಿಗೆ ಆಡುನುಡಿಯಲ್ಲಿದೆ. ಕವಿಯ ಮೂಲೋದ್ದೇಶ ಓದುಗರಿಗೆ ತಮ್ಮ ಅನಿಸಿಕೆಗಳನ್ನು ಆದಷ್ಟು ಸುಲಭ ರೀತಿಯಲ್ಲಿ ಮನವರಿಕೆ ಮಾಡಿಕೊಡಬೇಕೆಂಬುದೇ ಆಗಿರುವುದರಿಂದ ಅವರು ತಮಿಳಿನ ಮಡಿವಂತಿಕೆಗಾಗಲಿ, ವ್ಯಾಕರಣಕ್ಕಾಗಲಿ ಹೆಚ್ಚು ಗಮನ ನೀಡುವುದಿಲ್ಲ. ಕಥಾವಸ್ತು ಹೆಚ್ಚು ಅಸಂಭವನೀಯ ಘಟನೆಗಳಿಂದ ತುಂಬಿದ್ದು ನೀರಸವಾಗಿದೆ. ಇದು ಸ್ವಲ್ಪಮಟ್ಟಿಗೆ ನಿಜವೂ ಹೌದು. ಏಕೆಂದರೆ ಅನೇಕ ಸಂದರ್ಭ ಗಳಲ್ಲಿ ಕತೆಯ ಕಗ್ಗಂಟುಗಳು ಒಳ್ಳೆಯ ಘಟನೆಯ ಮೂಲಕ ಪರಿಹಾರವಾಗುತ್ತದೆ. ಅಂತಹ ಘಟನೆಗಳು ನಿಜಜೀವನದಲ್ಲಿ ಅಷ್ಟು ಶೀಘ್ರಗತಿಯಲ್ಲಿ ಅನುಕೂಲಕರವಾಗಿ ನಡೆಯುವುದು ತೀರಾ ಅಸಂಭವ. ಕತೆಯ ಮಧ್ಯೆ ಅಲ್ಲಲ್ಲಿ ಉದ್ದುದ್ದ ನೀತಿಬೋಧೆ ಯನ್ನು ಸೇರಿಸಿರುವುದು ಕತೆಯ ಓಟಕ್ಕೆ ಅಡ್ಡಿಪಡಿಸುತ್ತದೆ ಎಂಬುದು ಮತ್ತೊಂದು ದೋಷ. ಕವಿವರ್ಯರು ಒಬ್ಬ ಹುಚ್ಚು ಗಾಂಧಿಭಕ್ತರೆಂದು, ತಮಿಳು ಬೆಡಗುಗಾರ ರೆಂದು, ತಮಗೆ ಪ್ರಿಯವಾದ ಕೆಲವು ಧ್ಯೇಯಗಳನ್ನು ಪ್ರಚಾರಮಾಡಲು ತಮ್ಮ ಕತೆಗಳನ್ನು ಒಂದು ವೇದಿಕೆಯನ್ನಾಗಿ ಮಾಡಿಕೊಂಡಿದ್ದಾರೆಂದು ಕೆಲವರು ಟೀಕಿಸುವು ದುಂಟು. ಇಂತಹ ಟೀಕೆಗಳು ಏನೇ ಇದ್ದರೂ ಸಾರ್ವಜನಿಕರು ಇವರ ಕೃತಿಗಳನ್ನು ಆದರದಿಂದ ಕಾಣುತ್ತಲೇ ಬಂದಿದ್ದಾರೆ; ಅವು ಪುನರ್ಮುದ್ರಣಗಳನ್ನು ಕಾಣುತ್ತಾ ಬಂದಿವೆ.

'ಅನ್ಬು ಚೆಯ್ದ ಅರ್ಬುದಮ್' (ಪ್ರೇಮವು ಮಾಡಿದ ಪವಾಡ) ಲಘುಕಾವ್ಯ ಕವಿವರ್ಯರ ಮತ್ತೊಂದು ಕಾವ್ಯ. ಅರ್ಧ ಭಾಗ ಪದ್ಯ ರೂಪದಲ್ಲಿಯೂ ಉಳಿದರ್ಧ ಗದ್ಯ ರೂಪದಲ್ಲಿಯೂ ಇದೆ. ತಮಿಳು ಸಾಹಿತ್ಯದಲ್ಲಿ ಒಂದು ಹೊಸ ಪದ್ಧತಿಯನ್ನು ಮೊಟ್ಟಮೊದಲ ಬಾರಿಗೆ ಇವರು ರೂಢಿಗೆ ತಂದರು.

ಎರಡನೆಯ ಪ್ರಪಂಚ ಮಹಾಯುದ್ಧ, ಕ್ವಿಟ್ ಇಂಡಿಯಾ ಚಳುವಳಿ ಹಾಗೂ ಸುಭಾಸ್‌ಚಂದ್ರಬೋಸ್ ಅವರ ನಾಯಕತ್ವದಲ್ಲಿ ಪ್ರಾರಂಭವಾದ ಐ.ಎನ್.ಎ. ಇವುಗಳ ಪ್ರಭಾವವನ್ನು ಇದರ ಪ್ರತಿಯೊಂದು ಪುಟದಲ್ಲಿಯೂ ಕಾಣಬಹುದು. ಕಥಾನಾಯಕ ಶಂಕರ. ಹಿಂಸಾತ್ಮಕ ಕ್ರಾಂತಿಯಿಂದ ಮಾತ್ರವೇ ಭಾರತವು ಸ್ವತಂತ್ರವಾಗಲು ಸಾಧ್ಯ ಎಂದು ದೃಢವಾಗಿ ನಂಬಿರುವವನು. ಹಿಂಸಾಮಾರ್ಗಗಳನ್ನು ಕಲಿಯಲು ಸೈನ್ಯಕ್ಕೆ ಸೇರುತ್ತಾನೆ. ಆ ನಂತರ ಸುಭಾಸ್‌ಚಂದ್ರಬೋಸರ ದಳವನ್ನು ಸೇರುತ್ತಾನೆ. ಆದರೆ ಬ್ರಿಟಿಷರ ಕೈಗೆ ಸಿಕ್ಕುಬಿದ್ದು ಮರಣದಂಡನೆ ಶಿಕ್ಷೆಗೆ ಗುರಿಯಾಗುತ್ತಾನೆ. ಜಯಪಾಲ ಅವನ ಸ್ನೇಹಿತ, ಸೈನ್ಯಕ್ಕೆ ಸೇರಿ ಅಲ್ಲಿಯೇ ಮುಂದುವರೆಯುತ್ತಾನೆ. ಅವನು ಶಂಕರನಿಗೆ ಮರಣದಂಡನೆ ಶಿಕ್ಷೆ ತಪ್ಪಿಸಲು ರಹಸ್ಯವಾಗಿ ನೆರವಾಗುತ್ತಾನೆ. ಮೊದಲು ತಾತ್ಕಾಲಿಕ ವಾಗಿ ಶಿಕ್ಷೆಯಿಂದ ತಪ್ಪಿಸಿಕೊಳ್ಳಲು ಸಹಾಯ ಮಾಡುತ್ತಾನೆ, ಅನಂತರ ಅವನು ಸೆರೆ

ಮನೆಯಿಂದ ತಪ್ಪಿಸಿಕೊಳ್ಳಲು ಸಹಾಯ ಮಾಡುತ್ತಾನೆ. ತಲೆತಪ್ಪಿಸಿಕೊಂಡ ಶಂಕರನು ಐ.ಎನ್.ಎ. ದಳದ ಸೈನಿಕರು ಗಾಂಧೀಜಿಯವರ ಕೋರಿಕೆಯಂತೆ ಬಿಡುಗಡೆಯಾಗುವ ವರೆಗೂ ಈಚೆಗೆ ಬರಲಿಲ್ಲ.

ಶಂಕರ ಮಿತ್ರ ಜಯಪಾಲ ಸ್ನೇಹಿತರು. ಅವರ ತಂದೆ ತಾಯಂದಿರು ಅವರ ವಿವಾಹಗಳನ್ನು ಇಷ್ಟಕ್ಕೆ ವಿರೋಧವಾಗಿ ಏರ್ಪಡಿಸುತ್ತಾರೆ. ಅವರು ಪ್ರೀತಿಸಿದ್ದ ಹೆಣ್ಣುಗಳನ್ನು ತಪ್ಪಿಸಲು ಇಂತಹ ಕ್ರಮ ಅವರು ಕೈಗೊಂಡಿರುತ್ತಾರೆ. ಈ ಕಾರಣ ದಿಂದ ಅವರಿಬ್ಬರೂ ಸೈನ್ಯಕ್ಕೆ ಸೇರುತ್ತಾರೆ. ಪ್ರೀತಿಸಿದ್ದ ಹೆಣ್ಣುಗಳು ನಿಷ್ಠೆಯಿಂದಿದ್ದು ಇವರು ಹಿಂತಿರುಗುವವರೆಗೂ ಕಾದಿದ್ದು ಮದುವೆಯಾಗುತ್ತಾರೆ. ಖಳನಾಯಕ ಕುಪ್ಪುಸ್ವಾಮಿ ಶಂಕರನು ಪ್ರೀತಿಸಿದ್ದ ಹುಡುಗಿಯ ಮನಸ್ಸನ್ನು ಕಿರುಗಿಸಲು ವಿಫಲ ಯತ್ನ ಮಾಡುತ್ತಾನೆ. ಅನಾಮಧೇಯ ಪತ್ರಗಳ ಮೂಲಕ ಸುಳ್ಳು ವಿವರಗಳನ್ನು ಕೊಡುತ್ತಾನೆ. ಶಂಕರನು ಮಾರುವೇಷದಲ್ಲಿ ನಡೆಸಿದ ಪ್ರಯತ್ನಗಳಿಂದ ಅವೆಲ್ಲವೂ ವ್ಯರ್ಥವಾಗುತ್ತವೆ.

ಶಂಕರನು ತನ್ನ ಮಾವನೊಡನೆ ಮಾಡುವ ಚರ್ಚೆಗೆ ಕಾವ್ಯದ ಒಂದು ಭಾಗ ವಿನಿಯೋಗಿಸಲಾಗಿದೆ. ದೊಡ್ಡ ಪ್ರಮಾಣದ ಕೈಗಾರಿಕೆಗಳಿಗಿಂತ ಸಣ್ಣ ಪ್ರಮಾಣದ ಕೈಗಾರಿಕೆ ಗಳು ಅಪೇಕ್ಷಣೀಯ, ಹಿಂಸೆಗಿಂತ ಅಹಿಂಸೆಯು ಶ್ರೇಷ್ಠ ಎಂದು ಪ್ರತಿಪಾದಿಸುತ್ತಾ ಹಿಂಸೆಯಿಲ್ಲದ ಸಮಾಜವಾದ ಮುಂತಾದವುಗಳ ಬಗೆಗೆ ದೀರ್ಘ ಚರ್ಚೆಯನ್ನು ಸಂದರ್ಭೋಚಿತವಾಗಿ ಬಳಸಿಕೊಳ್ಳುತ್ತಾರೆ.

# ಗದ್ಯ

## ಕಾದಂಬರಿಗಳು

ಕವಿ ರಾಮಲಿಂಗಮ್ ಪಿಳ್ಳೆಯವರು ಮಲೈಕಳ್ಳನ್, ತಾಮರೈ ಕಣ್ಣಿ, ಕರ್ಪಗವಲ್ಲಿ ಮುಂತಾದ ಕೆಲವು ಕಾದಂಬರಿಗಳನ್ನು ಬರೆದಿದ್ದಾರೆ. ಕಥಾವಸ್ತು ಹಾಗೂ ಪಾತ್ರಗಳು ಕಾಲ್ಪನಿಕವಾದರೂ ಅವುಗಳು ಅಂದಿನ ಜೀವನದ ವಾಸ್ತವ ಘಟನೆಗಳನ್ನು ಚಿತ್ರಿಸುತ್ತವೆ. ಅಪರೋಕ್ಷವಾಗಿ ನೀತಿ ಬೋಧನೆಯು ಅವುಗಳನ್ನು ಬರೆಯುವಲ್ಲಿ ಇರುವುದಾದರೂ ಮುಖ್ಯವಾಗಿ ಅವು ಓದುಗರ ಮನರಂಜನೆಗಾಗಿ ಬರೆದವುಗಳಾಗಿವೆ.

'ಮಲೈಕಳ್ಳನ್' (ಬೆಟ್ಟದ ಕಳ್ಳ) ಕಾದಂಬರಿ ರಚನೆಯಲ್ಲಿ ಅವರ ಮೊದಲನೆಯ ಪ್ರಯತ್ನ. ವೇಲೂರಿನ ಸೆರೆಮನೆಯಲ್ಲಿರುವಾಗ 1932 ರಲ್ಲಿ ಅವರು ಇದನ್ನು ಬರೆದರು. ಇವರ ಜೊತೆಯಲ್ಲಿ ಸೆರೆಮನೆವಾಸಿಯಾಗಿದ್ದ ಬುಲುಸು ಸಾಂಬಮೂರ್ತಿ (ಅವಿಭಕ್ತ ಮದರಾಸ್ ಪ್ರಾಂತ್ಯದ ಶಾಸನ ಸಭೆಯ ಸಭಾಪತಿಯಾಗಿದ್ದವರು) ಅವರು ಕವಿವರ್ಯರು ರಚಿಸಿದ ಪದ್ಯಗಳನ್ನು ಕೇಳಿದ ಮೇಲೆ ಗದ್ಯದಲ್ಲಿಯೂ ಬರೆಯುವಂತೆ ಅವರನ್ನು ಒತ್ತಾಯಿಸಿದರು.

ವಿಜಯಪುರಿ ಎಂಬ ಗ್ರಾಮದ ಸುತ್ತಮುತ್ತಲಿನ ಶ್ರೀಮಂತ ಜಮೀನ್ದಾರರಿಗೆ ಹಾಗೂ ಜನರಿಗೆ ಈ ಬೆಟ್ಟದ ಕಳ್ಳನು ಸಿಂಹಸ್ವಪ್ನವಾಗಿದ್ದ. ಶ್ರೀಮಂತರ ಅಪಹರಣ, ಕೊಲೆ ಸುಲಿಗೆಗಳ ಬಗ್ಗೆ ವಿಜಯಪುರಿಯಲ್ಲಿ ಆಗಾಗ ಎಲ್ಲೆಲ್ಲೂ ಕತೆಗಳು ಕೇಳುತ್ತಲಿದ್ದುವು. ಆದರೆ ಅವನು ಶ್ರೀಮಂತರೂ ದುರ್ಮಾರ್ಗಿಗಳನ್ನು ಮಾತ್ರವೇ ಹಿಂಸಿಸುತ್ತಿದ್ದುದೂ ಒಳ್ಳೆಯವರ ತಂಟೆಗೆ ಎಂದೂ ಹೋಗುವುದಿಲ್ಲ ಎಂಬ ವಿಚಾರ ಅಷ್ಟೇ ಪ್ರಚಲಿತವಾಗಿತ್ತು. ನಿಜವಾಗಿ ಹೇಳಬೇಕಾದರೆ ಅವನು ಆ ಸುತ್ತಮುತ್ತಲಿನ ಜನರಿಗೆ ರಾಬಿನ್ ಹುಡ್‌ನಂತಿದ್ದು ಶ್ರೀಮಂತ ದುರ್ಮಾರ್ಗಿಗಳಿಂದ ಹಣ ದೋಚಿ ಬಡಬಗ್ಗರಿಗೆ ವಿನಿಯೋಗಿಸುತ್ತಿದ್ದ. ಕಾತ್ತವರಾಯನ್ ಎಂಬ ಹೆಸರಿನ ದರೋಡೆಕಾರನ ನಾಯಕತ್ವದಲ್ಲಿ ಮತ್ತೊಂದು ತಂಡ ನಿಜವಾಗಿಯೇ ದರೋಡೆ ನಡೆಸುತ್ತಿತ್ತು. ವೀರರಾಜನ್, ಕುತ್ತಿಪಟ್ಟಿ ಜಮೀನ್ದಾರ ಮುಂತಾದ ಶ್ರೀಮಂತರು ತೋರಿಕೆಗೆ ಶ್ರೀಮಂತರಾದರೂ ಈ ದರೋಡೆಕಾರನ ಸಹಾಯಪಡೆದು ಸುತ್ತಮುತ್ತಲಿನ ಶ್ರೀಮಂತರ ಸಂಪತ್ತನ್ನು ದೋಚುತ್ತಿದ್ದರು. ಬೆಟ್ಟದ ಕಳ್ಳನ ಮುಖ್ಯ ಗುರಿ ಈ ಕಳ್ಳರ ತಂಡದ ಪ್ರಯತ್ನಗಳನ್ನು ತಡೆಯುವುದೇ ಆಗಿತ್ತು,

ಈ ಕಾದಂಬರಿಯ ಖಳನಾಯಕ ವೀರರಾಜನು ಹೊರಗೆ ನೋಡಲು ಸಭ್ಯನಂತೆ ವರ್ತಿಸುತ್ತಿದ್ದು ನಿಜವಾಗಿ ಒಬ್ಬ ದಗಾಖೋರನಾಗಿದ್ದ. ಹಣವನ್ನು ಯಥೇಚ್ಛವಾಗಿ ಧರ್ಮಕಾರ್ಯಗಳಿಗೆ ಖರ್ಚುಮಾಡುತ್ತಾ ಹಾಗೆಯೇ ಅನೇಕ ಸಭ್ಯ ಹೆಂಗಸರ ಮಾನ ಹರಣವನ್ನು ಮಾಡಿದ್ದವನು. ಅವನು ಮನಸ್ಸು ಮಾಡಿದರೆ ಯಾವ ಸುಂದರ ಸ್ತ್ರೀ ಆಗಲಿ ಹೇಗಾದರೂ ಸರಿ ಮಾನಹರಣ ಮಾಡದೆ ಬಿಡುತ್ತಿರಲಿಲ್ಲ. ಚೊಕ್ಕೇಸರ್ ಎಂಬ ಅವರ ಮಾವ ಅದೇ ಊರಿನ ಧನಿಕನಾಗಿದ್ದ. ಅವನ ಮಗಳು ಪೂಂಗೋದೈ ತುಂಬಾ ಸುಂದರಿ ಹಾಗೂ ವೀರವನಿತೆಯಾಗಿದ್ದಳು. ವೀರ ರಾಜನಿಗೆ ಅವಳ ಮೇಲೆ ಕಣ್ಣು. ಹೇಗಾದರೂ ಮಾಡಿ ಅವಳನ್ನು ಮದುವೆಯಾಗಬೇಕೆಂದು ನಿರ್ಧರಿಸಿದ್ದ. ತನ್ನನ್ನು ಮದುವೆಯಾಗುವಂತೆ ಪೂಂಗೋದೈಯನ್ನು ಕೇಳಿದಾಗ ಅವಳು ಅವನನ್ನು ಧಿಕ್ಕರಿಸಿದ್ದು ಮಾತ್ರವಲ್ಲದೆ ಅವನನ್ನು ಹೀಯಾಳಿಸಿ ಮಾತನಾಡುತ್ತಾಳೆ. ಇದರಿಂದ ಕೋಪಗೊಂಡ ವೀರರಾಜನು ಅವಳನ್ನು ಬಲವಂತವಾಗಿ ಮಾನಪೂಲಿಸಲು ಪ್ರಯತ್ನಿಸುತ್ತಾನೆ. ಅವಳನ್ನು ಅಪಹರಿಸಿ ತರಲು ಕಾತ್ತವರಾಯನಿಗೆ ಹೇಳುತ್ತಾನೆ. ಕಾತ್ತವರಾಯನ ಪ್ರಯತ್ನವೆಲ್ಲಾ ಮಲೈಕಳ್ಳನ ಮಧ್ಯಪ್ರವೇಶದಿಂದ ನೀರುಪಾಲಾಗುತ್ತದೆ. ಮಲೈ ಕಳ್ಳನು ಅವಳನ್ನು ಸುಖವಾಗಿ ಸೊಕ್ಕೇಸರನ ಮನೆಗೆ ತಲುಪಿಸುತ್ತಾನೆ. ತೆನ್‌ಕಾಸಿ ಎಂಬವಳು ವೀರರಾಜನ ಒಬ್ಬ ಪ್ರೇಯಸಿ. ಅವಳ ಸಹಾಯಪಡೆದು ಪೂಂಗೋದೈಯ ಮೇಲೆ ಅತ್ಯಾಚಾರ ಮಾಡಲು ಪ್ರಯತ್ನಿಸುತ್ತಾನೆ. ಮಲೈಕಳ್ಳನು ಮತ್ತೆ ಅವನ ಯೋಚನೆಯನ್ನು ನಿಷ್ಕ್ರಿಯಗೊಳಿಸುತ್ತಾನೆ. ಕೊನೆಗೆ ಸೊಕ್ಕೇಸರನನ್ನೇ ಅಪಹರಿಸಿ ಅವನಿಂದ ಮಗಳಿಗೆ ವೀರರಾಜನನ್ನು ಮದುವೆಯಾಗುವಂತೆ ಪತ್ರ ಬರೆಸುತ್ತಾನೆ. ಮಲೈಕಳ್ಳನು ಸೊಕ್ಕೇಸರನನ್ನು ಸೆರೆಯಿಂದ ಬಿಡಿಸಿ ಅವನ ಮನೆಗೆ ಸೇರಿಸುತ್ತಾ ತಾನು ಅದೃಶ್ಯನಾಗುತ್ತಾನೆ. ಮರೆಯಲ್ಲಿದ್ದು ಇಂತಹ ಸಹಾಯ ಮಾಡುತ್ತಿದ್ದ ಬೆಟ್ಟದ ಕಳ್ಳನ ಬಗೆಗೆ ಸೊಕ್ಕೇಸರ ಮತ್ತು ಅವನ ಮಗಳಿಗೆ ಸಹಜವಾಗಿಯೇ ವಿಶ್ವಾಸ ಮೂಡುತ್ತದೆ. ಹೇಗಾದರೂ ಅವನ ಉಪಕಾರವನ್ನು ತೀರಿಸಬೇಕೆಂದು ನಿರ್ಧರಿಸುತ್ತಾರೆ.

ಆರುಮುಗಂ ಎಂಬ ಪೋಲಿಸ್ ಸಬ್ ಇನ್‌ಸ್ಪೆಕ್ಟರ್‌ರವರ ನಾಯಕತ್ವದಲ್ಲಿ ಬೆಟ್ಟದ ಕಳ್ಳನನ್ನು ಹಿಡಿಯಬೇಕೆಂದು ಪ್ರಯತ್ನಿಸಿ ವಿಫಲರಾಗುತ್ತಾರೆ. ಈ ಸಂದರ್ಭದಲ್ಲಿ ಒಬ್ಬ ಮುಸಲ್ಮಾನ ಧರ್ಮಿಷ್ಟ, ತಾನು ಸಿಂಗಪುರದ ನಿವಾಸಿಯೆಂದೂ, ಬೆಟ್ಟದ ಕಳ್ಳನ ಸ್ನೇಹಿತನೆಂದೂ ಪೋಲಿಸಿನವರಿಗೆ ಪರಿಚಯವಾಗುತ್ತಾನೆ. ಬೆಟ್ಟದ ಕಳ್ಳನು ಅಪ ಹರಿಸಿರುವ ಸಂಪತ್ತನ್ನು ಪಡೆಯಲು ಮತ್ತು ಅವನನ್ನು ಗುರುತಿಸಲು ತಾನು ಸಹಾಯ ಮಾಡುವುದಾಗಿ ಹೇಳುತ್ತಾನೆ. ಸೊಕ್ಕೇಸರನು ಏರ್ಪಡಿಸಿರುವ ಒಂದು ಔತಣಕೂಟಕ್ಕೆ ಬೆಟ್ಟದಕಳ್ಳನನ್ನು ಕರೆತರುವುದಾಗಿಯೂ ಹೇಳುತ್ತಾನೆ. ಅವನ ಸಹಾಯದಿಂದ ಕಾತ್ತವ ರಾಯನನ್ನು ಅವನ ಪೋಷಕರಾದ ವೀರರಾಜನನ್ನು ಹಾಗೂ ಕುತ್ತಿಪಟ್ಟಿ ಜಮೀನ್ದಾರ ನನ್ನು ಹಿಡಿಯಲು ಸಫಲರಾಗುತ್ತಾರೆ. ಬೆಟ್ಟದ ಕಳ್ಳನನ್ನು ಅಲ್ಲಿಯೇ ಔತಣಕೂಟದಲ್ಲಿ

ಸೆರೆಹಿಡಿಯಲು ಪೋಲಿಸಿನವರು ಕಾಯುತ್ತಿರುತ್ತಾರೆ. ಆದರೆ ಸ್ವಲ್ಪ ಮುಂಚಿತವಾಗಿ ಆ ಮುಸಲ್ಮಾನನು ಸೊಕ್ಕೇಸರನ ಬಳಿ ಬಂದು ಬೆಟ್ಟದ ಕಳ್ಳನು ಪೂಂಗೋದೈಯನ್ನು ಮದುವೆಯಾಗಲು ಇಷ್ಟಪಡುತ್ತಾನೆ ಎಂದು ತಿಳಿಸುತ್ತಾನೆ. ತನ್ನ ಮಗಳನ್ನು ಒಬ್ಬ ದರೋಡೆಕೋರನಿಗೆ ಕೊಡುವುದು ಹೇಗೆ ಎಂದು ಒಂದು ಕ್ಷಣ ಸೊಕ್ಕೇಸರನು ದಿಗ್ಭ್ರಾಂತನಾಗುತ್ತಾನೆ. ನಂತರ ಆ ಮುಸಲ್ಮಾನ ಬಂದು ಬೆಟ್ಟದ ಕಳ್ಳನ ಪೂರ್ಣ ವೃತ್ತಾಂತವನ್ನು ವಿವರಿಸಲು ತೊಡಗುತ್ತಾನೆ. ಸೊಕ್ಕೇಸರನಿಗೆ ಆಗ ಅರ್ಥವಾಗುತ್ತದೆ ಬೆಟ್ಟದ ಕಳ್ಳ ಬೇರಾರೂ ಅಲ್ಲದೆ ಚಿಕ್ಕಂದಿನಲ್ಲಿ ಓಡಿಹೋಗಿ ಕಳ್ಳರಿಂದ ರಕ್ಷಿತನಾದ ತನ್ನ ಸಹೋದರಿಯ ಮಗ ವೀರಯ್ಯನೇ ಎಂಬ ಸಂಗತಿ. ಈ ವಿಷಯ ತಿಳಿದ ನಂತರ ಪೂಂಗೋದೈಯನ್ನು ಬೆಟ್ಟದ ಕಳ್ಳನಿಗೆ ಕೊಟ್ಟು ಮದುವೆ ಮಾಡಲು ಸೊಕ್ಕೇಸರನು ಸಮ್ಮತಿಸುತ್ತಾನೆ. ಮರೆಯಲ್ಲಿ ನಿಂತು ಎಲ್ಲವನ್ನೂ ಆಲಿಸುತ್ತಿದ್ದ ಪೂಂಗೋದೈ ಒಳಗೊಳಗೇ ಬೆಟ್ಟದ ಕಳ್ಳನ ವಿಚಾರದಲ್ಲಿ ತನ್ನ ಒಲವನ್ನು ನಿರ್ಧರಿಸಿಕೊಳ್ಳುತ್ತಾಳೆ. ಔತಣಕೂಟಕ್ಕೆ ಬೆಟ್ಟದ ಕಳ್ಳನು ಬರುವುದಕ್ಕೆ ಅವರು ಕಾತುರದಿಂದ ನಿರೀಕ್ಷಿಸುತ್ತಾರೆ. ಆದರೆ ಬಂದವನು ಬೇರಾರೂ ಅಲ್ಲದೆ ಮುಸಲ್ಮಾನ ಸಾಹುಕಾರ. ಸೊಕ್ಕೇಸರನ ಜೊತೆಯಲ್ಲಿ ಸ್ವಲ್ಪ ಸಮಯ ಮಾತನಾಡಿದ ಅವನು ನೇರವಾಗಿ ಪೂಂಗೋದೈಯ ಕೊಠಡಿಗೆ ಹೋಗುತ್ತಾನೆ. ತನ್ನನ್ನು ಮದುವೆಯಾಗುವಂತೆ ಅವಳನ್ನು ಕೇಳುತ್ತಾನೆ. ದಿಕ್ಕು ತೋಚದೆ ನಿಂತಿದ್ದ ಅವಳಿಗೆ ತಾನು ಅವಳ ಸೋದರ ಮಾವನ ಮಗ ವೀರಯ್ಯನೆಂದು ಬಿಡಿಸಿ ಹೇಳುತ್ತಾನೆ. ಕೂಡಲೆ ಅವಳು ಅವನ ಮಡಿಲಲ್ಲಿ ಸೇರುತ್ತಾ ಪರಸ್ಪರ ಆಲಿಂಗನ ಮಾಡಿಕೊಳ್ಳುತ್ತಾರೆ. ಪೂಂಗೋದೈಯ ಅತ್ತೆ ಆಕಸ್ಮಾತ್ ಅಲ್ಲಿಗೆ ಬರುತ್ತಾಳೆ. ಆಕೆಯು ಅವರಿಬ್ಬರೂ ಆಲಿಂಗನದಲ್ಲಿರುವುದನ್ನು ಗಮನಿಸುತ್ತಾಳೆ. ವಿಷಯ ಮನೆಯಲ್ಲೆಲ್ಲಾ ತಕ್ಷಣ ಹರಡುತ್ತದೆ. ಆ ಮುಸಲ್ಮಾನನನ್ನು ತಕ್ಕರೀತಿಯಲ್ಲಿ ಶಿಕ್ಷಿಸಲು ಸೊಕ್ಕೇಸರನು ಆಗ್ರಹನಾಗುತ್ತಾನೆ. ಅನಂತರ ಮುಸಲ್ಮಾನ ಸಾಹುಕಾರ ಸೊಕ್ಕೇಸರನ ಮುಂದೆ ಒಂದು ನಿಲ್ಲುತ್ತಾನೆ. ತನ್ನ ಕೃತಕ ಗಡ್ಡವನ್ನು ತೆಗೆದು ಹಾಕಿ ವೀರಯ್ಯನೆಂಬ ಬೆಟ್ಟದ ಕಳ್ಳನು ತಾನೇ ಎಂದು ತಿಳಿಸುತ್ತಾನೆ. ಅಲ್ಲಿ ನೆರೆದಿದ್ದ ಅವನ ಜನರೆಲ್ಲಾ ಮುಸಲ್ಮಾನ ಸಾಹುಕಾರನೇ ಬೆಟ್ಟದ ಕಳ್ಳನೆಂದು ತಿಳಿದು ಆಶ್ಚರ್ಯಚಕಿತರಾಗುತ್ತಾರೆ. ಸೊಕ್ಕೇಸರನ ಮನೆಗೆ ಹೊರಡುವ ಮುಂಚೆಯೇ ಮುಸಲ್ಮಾನ ಸಾಹುಕಾರ ಬೆಟ್ಟದ ಕಳ್ಳನು ದೋಚಿರುವ ಎಲ್ಲಾ ಒಡವೆ ವಸ್ತು ಜನಗಳನ್ನು ಪೋಲಿಸರ ವಶಕ್ಕೆ ಒಪ್ಪಿಸಿರುತ್ತಾನೆ. ಅವರ ಅಪರಾಧಗಳಿಗೆ ಕಾನೂನಿನ ಪ್ರಕಾರ ಅವರನ್ನು ಶಿಕ್ಷಿಸಲಾಗುತ್ತದೆ. ಒಡವೆ, ವಸ್ತುಗಳನ್ನು ಅವುಗಳ ಮಾಲೀಕರಿಗೆ ಒಪ್ಪಿಸಲಾಗುತ್ತದೆ. ಹೀಗೆ ಬೆಟ್ಟದ ಕಳ್ಳನು ವಿಜಯಪುರಿಯಲ್ಲಿ ನಡೆಯುತ್ತಿದ್ದ ದುರ್ವರ್ತನೆಗಳನ್ನು ತಪ್ಪಿಸಿದ್ದು ಮಾತ್ರವಲ್ಲದೆ ಪೂಂಗೋದೈಯನ್ನು ಮದುವೆಯಾಗುವುದರಲ್ಲಿ ಜಯಶಾಲಿಯಾಗುತ್ತಾನೆ.

ಈ ಕಾದಂಬರಿಯಲ್ಲಿ ರೋಮಾಂಚನಗೊಳಿಸುವ ಘಟನೆಗಳಿವೆ. ಪೂಂಗೋದೈಯನ್ನು ಅಪಹರಿಸುವುದು, ಬೆಟ್ಟದ ಕಳ್ಳನು ಅವಳನ್ನು ರಕ್ಷಿಸುವುದು, ಬೆಟ್ಟದ ಕಳ್ಳನ ಬಿಡಾರಕ್ಕೆ ಅವಳನ್ನು ಕರೆದುಕೊಂಡು ಹೋಗುವ ರಹಸ್ಯವಿಧಾನ, ರಹಸ್ಯವಾಗಿ ತಾನಾಗಿ ತೆಗೆದುಕೊಳ್ಳುವ ಬಾಗಿಲುಗಳು, ಬೆಟ್ಟದ ನಡುವಿನ ಕಂದರಗಳನ್ನು ದಾಟಲು ಆಕಾಶ ಮಾರ್ಗದಲ್ಲಿ ನಿರ್ಮಿಸಲಾಗಿರುವ ಸೇತುವೆ ಮುಂತಾದ ಘಟನೆಗಳು ಓದುಗರನ್ನು ಚಕಿತರನ್ನಾಗಿ ಮಾಡುತ್ತವೆ. ಬೆಟ್ಟದ ಕಳ್ಳನ ಬಗೆಗೆ ರಹಸ್ಯ ಕೊನೆಯವರೆಗೂ ಬಹಿರಂಗ ವಾಗುವುದಿಲ್ಲ. ಮುಸಲ್ಮಾನ ಸಾಹುಕಾರನೇ ಬೆಟ್ಟದ ಕಳ್ಳನೆಂಬ ವಿಚಾರ ಓದುಗರಿಗೆ ಅತ್ಯಂತ ಆಶ್ಚರ್ಯವನ್ನುಂಟು ಮಾಡುತ್ತದೆ. ಬೆಟ್ಟದ ಕಳ್ಳನೇ ಪೂಂಗೋದೈಯ ಸೋದರತ್ತೆಯ ಮಗ ವೀರಯ್ಯನೆಂಬ ಸಂಗತಿ ಎಲ್ಲವೂ ಅನಿರೀಕ್ಷಿತ ಘಟನೆಗಳು. ಮುಖ್ಯಸಂದೇಹವನ್ನು ಕತೆಯಲ್ಲಿ ಕೊನೆಯತನಕ ಹಾಗೆಯೇ ಉಳಿಸಿಕೊಂಡು ಬರಲಾಗಿದೆ.

ಈ ಕತೆಯಲ್ಲಿ 'ಬೆಳ್ಳಗಿರುವುದೆಲ್ಲಾ ಹಾಲಲ್ಲ', 'ಹೊಳೆಯುವುದೆಲ್ಲಾ ಚಿನ್ನವಲ್ಲ' ಎಂಬ ಮುಖ್ಯ ನೀತಿಯನ್ನು ಸ್ಪಷ್ಟಪಡಿಸಲಾಗಿದೆ. ದುರಾತ್ಮರು ಸಜ್ಜನರಂತೆ ಸೋಗು ಹಾಕಿಕೊಂಡಿರುವುದನ್ನೂ, ದುರ್ಮಾರ್ಗಿಯವರಂತೆ ಕಂಡುಬಂದರೂ ವಾಸ್ತವವಾಗಿ ಸಜ್ಜನ ರಾಗಿರುವವರನ್ನು ಇಲ್ಲಿ ಚಿತ್ರಿಸಲಾಗಿದೆ. ಕಾದಂಬರಿಯ ಎಲ್ಲಾ ಪಾತ್ರಗಳೂ ಕಾಲ್ಪನಿಕ ವೆಂದು ಲೇಖಕರು ಹೇಳಿದ್ದಾರಾದರೂ ವಾಸ್ತವವಾಗಿ ಅವರು ಸೇಲಮ್ ಜಿಲ್ಲೆಯ ಪ್ರಸಿದ್ಧ 'ಕೂಲಾಂಕಾಲಿನ್' ಎಂಬ ದರೋಡೆಕಾರನ ರಾಬಿನ್‌ಹುಡ್ ಮಾದರಿಯ ಚಟುವಟಿಕೆಗಳನ್ನು ಗಮನದಲ್ಲಿರಿಸಿಕೊಂಡು ಪಾತ್ರ ಚಿತ್ರಣ ಮಾಡಿದ್ದಾರೆಂದು ಸ್ಪಷ್ಟ ವಾಗುತ್ತದೆ. ಪೂಂಗೋದೈಯ ತಾಯಿ ಪೊನ್ನಮ್ಮ ದರೋಡೆಕಾರರ ಮೇಲೆ ಗುಂಡು ಹಾರಿಸಿ ಓಡಿಸುವ ಘಟನೆ ಲೇಖಕರ ಅಜ್ಜಿ ಕಳ್ಳನೊಬ್ಬನನ್ನು ಹಿಡಿದ ಘಟನೆಯನ್ನು ನೆನಪಿಗೆ ತರುತ್ತದೆ. ಪೋಲಿಸ್ ಸಬ್-ಇನ್‌ಸ್ಪೆಕ್ಟರ್ ಆಮುಗಂ ಅವರು ಹೆಡ್ ಕಾನ್‌ಸ್ಟೇಬಲ್ ಆಗಿದ್ದ ಲೇಖಕರ ತಂದೆಯ ಪಡಿಯಚ್ಚಿನಂತೆ ಕಾಣುತ್ತಾರೆ.

ಈ ಕತೆಯಲ್ಲಿಯೂ ಗಾಂಧೀಜಿಯವರ ಅಹಿಂಸಾವಾದ ಮರೆತಿಲ್ಲವೆಂದು ಕಾಣುತ್ತದೆ. ಪೂಂಗೋದೈಯೊಡನೆ ಬೆಟ್ಟದ ಕಳ್ಳನು ನಡೆಸಿದ ಒಂದು ಸಂಭಾಷಣೆಯಲ್ಲಿ ತಾನು ವಿನಾಕಾರಣ ಯಾರನ್ನು ಹಿಂಸಿಸಿಲ್ಲವೆಂದೂ, ತನ್ನ ಪ್ರಾಣರಕ್ಷಣೆಯ ಸಮಯದಲ್ಲಿ ಮಾತ್ರ ಹಿಂಸಾಕ್ರಮವನ್ನು ಅನುಸರಿಸಿರುವುದಾಗಿಯೂ ಹೇಳುತ್ತಾನೆ. ತಿರುಕ್ಕುರಳಿನ ಒಂದು ಪದ್ಯವನ್ನು ಉದಾಹರಿಸುತ್ತಾನೆ. ನನ್ರಾಕುಮ್ ಆಕ್ಕಮ್ ಪೆರಿದೆನ್ನುಮ್ ಚಾನ್ರೋರ್‌ಕ್ಕು ಕೊನ್ರುರ್‌ಕುಮ್ ಆಕ್ಕಮ್ ಕಡೈ ಹಿಂಸೆಯಿಂದ, ಕೊಲೆಯಿಂದ ಮಾಡಿದ ಯಾವುದೇ ದೊಡ್ಡ ಕೆಲಸವಾದರೂ ಅದು ನೀಚ ಕೆಲಸವೆಂದೇ ಭಾವಿಸುತ್ತಾರೆ ಹಿರಿಯರು.

ಮುಸಲ್ಮಾನ ಸಾಹುಕಾರನೊಬ್ಬನ ಪಾತ್ರವನ್ನು ಸೃಷ್ಟಿಸಿ ಅವನು ವಿಜಯ ಪುರಿಯ ಎಲ್ಲಾ ಹಿರಿಯರೊಡನೆ ಔತಣಕೂಟದಲ್ಲಿ ಭಾಗವಹಿಸುವ ಘಟನೆಯ ಮೂಲಕ ಓದುಗರ ಮನಸ್ಸಿನಲ್ಲಿ ಹಿಂದೂ–ಮುಸ್ಲಿಮ್ ಬಾಂಧವ್ಯವನ್ನು ಎತ್ತಿ ಹಿಡಿದಿದ್ದಾರೆ.

ಈ ಕಾದಂಬರಿಯು ತಮಿಳುನಾಡಿನಾದ್ಯಂತ ಬಹು ಜನಪ್ರಿಯತೆಯನ್ನು ಪಡೆದಿದೆ. ಶ್ರೀ ರಾಮುಲು ನಾಯ್ಡು ಅವರು ಇದನ್ನು ಚಲನಚಿತ್ರವನ್ನಾಗಿ ಮಾಡಿದ್ದಾರೆ. ಲೇಖಕರ ಮಗ ಬಾಲು ಅವರು ಇವರಿಗೆ ಸಹಾಯಕರಾಗಿ ಕೆಲಸ ಮಾಡಿದ್ದಾರೆ. ಬೆಳ್ಳಿ ತೆರೆಯ ಮೇಲೆ ಈ ಚಿತ್ರ ಹಲವಾರು ಚಿತ್ರಮಂದಿರಗಳಲ್ಲಿ ತುಂಬಿದ ಗೃಹಗಳಲ್ಲಿ ನೂರು ದಿನಗಳಿಗಿಂತಲೂ ಹೆಚ್ಚು ಪ್ರದರ್ಶಿತವಾಗಿ ಜನಪ್ರಿಯವಾಗಿದೆ. ತಮಿಳುನಾಡಿನ ಮುಖ್ಯ ಮಂತ್ರಿಗಳಾಗಿದ್ದ ಎಂ.ಜಿ. ರಾಮಚಂದ್ರನ್ ಅವರು ಬೆಟ್ಟದ ಕಳ್ಳನ ಪಾತ್ರದಲ್ಲಿ ನಟಿಸಿ ಇದರ ಮೂಲಕ ಹೆಚ್ಚು ಜನಪ್ರಿಯತೆಯನ್ನು ಪಡೆದರು. ಈ ಚಿತ್ರ ಕನ್ನಡ, ತೆಲುಗು, ಮಲಯಾಳಂ, ಸಿಂಹಳ ಹಾಗೂ ಹಿಂದಿ ಮುಂತಾದ ಭಾಷೆಗಳಲ್ಲಿಯೂ ತಯಾರಾಗಿದ್ದು ಎಲ್ಲಾ ಭಾಷೆಗಳಲ್ಲಿಯೂ ಜನಪ್ರಿಯತೆ ಪಡೆದಿದೆ. 1954ರಲ್ಲಿ ತಮಿಳು ಅವತರಣಿಕೆಯ ಈ ಚಿತ್ರಕ್ಕೆ ರಾಷ್ಟ್ರಪತಿಯ ಪದಕ ದೊರೆತಿದೆ.

ಲೇಖಕರ ಮತ್ತೊಂದು ಜನಪ್ರಿಯ ಸಾಮಾಜಿಕ ಕಾದಂಬರಿ 'ಕರ್ಪಗವಲ್ಲಿ' ಕಾದಂಬರಿಯ ಕಥಾನಾಯಕಿ ಕರ್ಪಗವಲ್ಲಿಯನ್ನು ಮೊದಲನೆಯ ಅಧ್ಯಾಯದಲ್ಲಿ ಪ್ರಜ್ಞಾಪೂರ್ಣ ಮಹಿಳೆ ಹಾಗೂ ತಾಳ್ಮೆಯ ಸಾಕಾರಮೂರ್ತಿಯಾಗಿ ಪರಿಚಯಿಸು ತ್ತಾರೆ. ಅವಳ ಸಹೋದರ ಮಾಣಿಕ್ಕಮ್ ಅವರ ಮನೆಯೆದುರಿರುವ ಸೇಠ್ ಒಬ್ಬರ ಮಗಳೊಡನೆ ಅಸಭ್ಯ ರೀತಿಯಲ್ಲಿ ವರ್ತಿಸಿದನೆಂಬ ಅಪಾದನೆ ಹೊತ್ತು ಮನೆ ಬಿಟ್ಟು ಹೋಗಿರುತ್ತಾನೆ. ಅವನು ಎಲ್ಲಿದ್ದಾನೆ ಎಂಬ ವಿಚಾರ ಯಾರಿಗೂ ತಿಳಿಯದು. ಅವಳ ತಂದೆ ಚಂದ್ರಶೇಖರ್ ಅವರ ಸಹೋದರಿಯ ಗಂಡ ತಿರುವೇಂಗಡಮ್ ಅವರ ಆಸ್ತಿ ಪಾಸ್ತಿ ಉಸ್ತುವಾರಿಯನ್ನು ನೋಡಿಕೊಂಡು ಬರಲು ಸಿಂಗಪುರಕ್ಕೆ ಹೋದವರು ಅವರೂ ಸಹ ಪತ್ತೆಯಿಲ್ಲವೆಂಬ ಸುದ್ದಿ ಬರುತ್ತದೆ. ತಿರುವೇಂಗಡಮ್‌ನ ಮಗ ತಿರುಜ್ಞಾನಮ್ ಕರ್ಪಗವಲ್ಲಿಯ ಭಾವಿಪತಿ ಎಂದು ಈಗಾಗಲೇ ತೀರ್ಮಾನವಾಗಿರುತ್ತದೆ. ತಿರುಜ್ಞಾನಮ್ ಉನ್ನತ ವ್ಯಾಸಂಗಕ್ಕಾಗಿ ಲಂಡನ್ ನಗರಕ್ಕೆ ಹೋಗುವ ಮಾರ್ಗದಲ್ಲಿ ಎರಡನೆ ಮಹಾಯುದ್ಧದಲ್ಲಿ ಬ್ರಿಟಿಷರ ಪರವಾದ ಒಬ್ಬ ಗೂಢಚಾರನೆಂಬ ಆಪಾದನೆ ಹೊತ್ತು ದಸ್ತಗಿರಿಯಾಗುತ್ತಾನೆ. ಮರಣದಂಡನೆಯ ವಾರ್ತೆ ತಿಳಿದ ಅವರ ತಂದೆ ಚಂದ್ರಶೇಖರನಿಗೆ ತನ್ನ ಆಸ್ತಿಯ ಉಸ್ತುವಾರಿಯ ಪತ್ರ ಬರೆದು ಮರಣ ಹೊಂದುತ್ತಾನೆ. ಮಾಣಿಕ್ಕಮ್ ಸಿಂಗಪುರಕ್ಕೆ ಹೋಗಿ ಅಲ್ಲಿ ಒಬ್ಬ ಪೋಲಿಸ್ ಸಾರ್ಜೆಂಟ್ ಆಗಿ ನೇಮಕವಾಗುತ್ತಾನೆ. ಅವನು ಕಳ್ಳರ ಗುಂಪನ್ನು ಪತ್ತೆಮಾಡಿ ಚಂದ್ರಶೇಖರನನ್ನು ಅವರ ಸೆರೆಯಿಂದ ತಪ್ಪಿಸುತ್ತಾನೆ. ಚಂದ್ರಶೇಖರನ ಸಹೋದರ ನೊಬ್ಬನ ಮಗ ಸಿಂಗಾರಮ್ ಎಂಬುವನೇ ಕಳ್ಳರ ನಾಯಕನೆಂಬ ವಿಚಾರ ತಿಳಿಯುತ್ತದೆ. ಕರ್ಪಗವಲ್ಲಿಯನ್ನು ಮದುವೆಯಾಗಿ ಅವಳ ಆಸ್ತಿಯ ಜೊತೆಗೆ ತಿರುವೇಂಗಡಮ್‌ನ ಆಸ್ತಿಯನ್ನು ತಾನು ಪಡೆಯಬೇಕೆಂದು ತೀರ್ಮಾನಿಸುತ್ತಾನೆ.

ಚಂದ್ರಶೇಖರನ ಸಹೋದರನೊಬ್ಬನ ಮಗ ಧೂರ್ತ ವೀರಸಾಮಿ. ಅವನ ಸಹಾಯ ಪಡೆದು ಕರ್ಪಗವಲ್ಲಿಯನ್ನು ಅಪಹರಿಸಲು ಪ್ರಯತ್ನಿಸುತ್ತಾನೆ. ಇದು

ಕ್ಯಾಥೋಲಿಕ್ ಪಾದ್ರಿಯೊಬ್ಬನ ಮಧ್ಯ ಪ್ರವೇಶದಿಂದ ವಿಫಲವಾಗುತ್ತದೆ. ಆ ಪಾದ್ರಿ ಬೇರಾರೂ ಅಲ್ಲದೆ ತಿರುಜ್ಞಾನಮ್ ಆಗಿರುತ್ತಾನೆ. ಇಟಲಿಯ ಸೆರೆಯಿಂದ ತಪ್ಪಿಸಿಕೊಂಡು ಅವನು ಪಾದ್ರಿ ವೇಷದಲ್ಲಿ ಭಾರತಕ್ಕೆ ಬಂದಿರುತ್ತಾನೆ. ಅವರಿಬ್ಬರೂ ತಮ್ಮ ಗುರುತನ್ನು ಚಂದ್ರಶೇಖರನು ಸಿಂಗಪುರದಿಂದ ವಾಪಸಾದ ನಂತರ ಒಂದು ಔತಣ ಕೂಟದಲ್ಲಿ ಬಹಿರಂಗ ಪಡಿಸುತ್ತಾರೆ. ಕೊನೆಯಲ್ಲಿ ತಿರುಜ್ಞಾನಮ್ ಮತ್ತೆ ಹಿಂದೂ ಮತಕ್ಕೆ ಮತಾಂತರನಾಗುತ್ತಾನೆ, ಕರ್ಪಗವಲ್ಲಿಯನ್ನು ಮದುವೆಯಾಗುತ್ತಾನೆ. ಸೇಠನ ಮಗಳು ಗಂಗಾಬಾಯಿಯು ಮಾಣಿಕ್ಯಮ್‌ನನ್ನು ಮದುವೆಯಾಗಲು ಮುಂದೆ ಬಂದು ಎಲ್ಲರನ್ನು ಚಕಿತರನ್ನಾಗಿ ಮಾಡುತ್ತಾಳೆ. ಮಾಣಿಕ್ಯಮ್ ಗಂಗಾಬಾಯಿಯ ಒಬ್ಬ ನಿಜವಾದ ಸ್ನೇಹಿತ. ಸುಳ್ಳುವದಂತಿಯಿಂದಾಗಿ ಅವಳ ಜಾತಿಗೆ ಸೇರಿದವರು ಅವಳನ್ನು ಮದುವೆಯಾಗಲು ಯಾರೂ ಮುಂದೆ ಬಂದಿರಲಿಲ್ಲವಾಗಿ ಅವಳು ಹತಾಶಳಾಗಿದ್ದಳು.

ಲೇಖಕರು ಅಪರೋಕ್ಷವಾಗಿ ಈ ಕಾದಂಬರಿಯಲ್ಲಿ ಅಂತರಜಾತೀಯ ವಿವಾಹವನ್ನು ಪ್ರತಿಪಾದಿಸಿದ್ದಾರೆ. 'ಬೆಟ್ಟದ ಕಳ್ಳ'ದಲ್ಲಿ ಕಂಡಂತೆ ಇಲ್ಲಿಯೂ ದರೋಡೆಕಾರರ ಗುಂಪು, ಅವರ ನಿಗೂಢ ಸ್ಥಳಗಳು, ಪೋಲಿಸರೊಡನೆ ಅವರ ಹೋರಾಟಗಳು ಮುಂತಾದವುಗಳ ಚಿತ್ರಣವಿದೆ. ಕ್ಯಾಥೋಲಿಕ್ ಪಾದ್ರಿ ಹಾಗೂ ಸಾರ್ಜೆಂಟ್ ಇವರ ಬಗೆಗೆ ಕೊನೆಯ ವರೆಗೂ ಸಂದೇಹವನ್ನು ಉಳಿಸಿಕೊಳ್ಳಲಾಗಿದೆ.

'ತಾಮರೈ ಕಣ್ಣಿ' (ತಾವರೆ ಕಣ್ಣಿನವಳು) ಎರಡನೆಯ ಮದುವೆಯ ದುಷ್ಪರಿಣಾಮಗಳನ್ನು ಚಿತ್ರಿಸಿರುವ ಒಂದು ಸಾಮಾಜಿಕ ಕಾದಂಬರಿ. ಮುರುಗೇಶನ್ ತಾಮರೈ ಕಣ್ಣಿಯನ್ನು ಮದುವೆಯಾಗಿರುತ್ತಾನೆ. ಜಾನಕಿ ಎಂಬ ಹೆಣ್ಣುಮಗುವಾದ ನಂತರ ತಾಮರೈ ಕಣ್ಣಿ ಹಾಸಿಗೆ ಹಿಡಿಯುತ್ತಾಳೆ. ಬೇರೊಂದು ಹೆಣ್ಣನ್ನು ಮದುವೆಯಾಗುವಂತೆ ತನ್ನ ಪತಿ ಮುರುಗೇಶನ್‌ನಲ್ಲಿ ಅವಳು ಕೇಳಿಕೊಳ್ಳುತ್ತಾಳೆ. ಮುರುಗೇಶನ್‌ನ ತಾಯಿ ಅಂಗೈಯರ್ ಕಣ್ಣಿ ತನ್ನ ಸಂಬಂಧಿಯೊಬ್ಬರ ಮಗಳು ಸುಂದರಿಬಾಯಿ ಎಂಬ ಹೆಣ್ಣೊಂದನ್ನು ಮದುವೆಯಾಗಲು ಬಲವಂತವಾಗಿ ಒಪ್ಪಿಸುತ್ತಾಳೆ. ಸುಂದರಿಬಾಯಿಯು ದುಂದುಗಾರಿಕೆಯ ಹಾಗೂ ಗರ್ವದ ಹೆಣ್ಣು. ಮುರುಗೇಶನ್‌ನ ಹೆಂಡತಿಯನ್ನೂ, ತನ್ನ ಅತ್ತೆಯನ್ನು ಹಾಗೂ ಮುರುಗೇಶನ್‌ನ ಆಸ್ತಿ ಪಾಸ್ತಿ ವಹಿವಾಟನ್ನು ಜಾಗರೂಕತೆಯಿಂದ ನಿರ್ವಹಿಸುತ್ತಿದ್ದ ತಾಮರೈಕಣ್ಣಿಯ ಸಹೋದರನನ್ನು ಮನೆಯಿಂದ ಹೊರನೂಕಿದಳು. ದುಂದುಗಾರಿಕೆಯ ಪರಿಣಾಮವಾಗಿ ಕೆಲವೇ ದಿನಗಳಲ್ಲಿ ಸಂಸಾರವು ಆರ್ಥಿಕ ದುಃಸ್ಥಿತಿಗೆ ಇಳಿಯಿತು. ಇದರಿಂದ ತಪ್ಪಿಸಿಕೊಳ್ಳಲು ಜಾನಕಿಯನ್ನು ವಯಸ್ಸಾದ ಶ್ರೀಮಂತನೊಬ್ಬನಿಗೆ ಮದುವೆ ಮಾಡಲು ಪ್ರಯತ್ನಿಸುತ್ತಾಳೆ. ಫಾತಿಮಾ ಎಂಬ ಮುಸಲ್ಮಾನ ನೆರೆಮನೆ ಹೆಂಗಸೊಬ್ಬಳ ಸಹಾಯದಿಂದ ಮದುವೆಯ ಮಂಟಪದಿಂದ ತಪ್ಪಿಸಿಕೊಂಡು ಹೋಗಿ ಆಕಸ್ಮಾತ್ ತಿರುಚಿಯಲ್ಲಿದ್ದ ತನ್ನ ತಾಯಿ, ಅಜ್ಜಿ ಹಾಗೂ ಸೋದರ ಮಾವ ಇವರ ಬಳಿ ಸೇರುತ್ತಾಳೆ. ಅವಳ ಮಾವನ ಮಗನನ್ನು ಮೊದಲಿನಿಂದಲೂ ಪ್ರೀತಿಸುತ್ತಿದ್ದ ಅವಳು ಅವನನ್ನೇ ಮದುವೆಯಾಗುತ್ತಾಳೆ.

ವಿವಾಹಾಚರಣೆಯಲ್ಲಿ ಬ್ರಾಹ್ಮಣರ ಪಾತ್ರವನ್ನು ವಿರೋಧಿಸುವ ಗುಂಪನ್ನು ಲೇಖಕರು ಈ ಕಾದಂಬರಿಯ ಮೊದಲನೆಯ ಅಧ್ಯಾಯದಲ್ಲಿಯೇ ಹೀಯಾಳಿಸಿದ್ದಾರೆ. ತಾಮರೈ ಕಣ್ಣಿಯ ವಿವಾಹ ಒಬ್ಬ ಧನಿಕನೊಡನೆ ಇನ್ನೇನು ನಡೆಯಬೇಕಿತ್ತು. ಅವನು ಹೆಣ್ಣಿನ ಮನೆಗೆ ಪ್ರವೇಶಿಸುತ್ತಿದ್ದಂತೆಯೇ ಬ್ರಾಹ್ಮಣ ಪೂಜಾರಿಗಳನ್ನು ಅವರ ಆಚರಣೆ ಗಳನ್ನು ಹೀಯಾಳಿಸಿ ಮಾತನಾಡಲು ಪ್ರಾರಂಭಿಸುತ್ತಾನೆ. ಹುಡುಗಿಯ ತಂದೆಯು ಮನೆಯ ಬೇರೊಂದು ಸ್ಥಳಕ್ಕೆ ಅವಳನ್ನು ಕರೆದುಕೊಂಡು ಹೋಗಿ ತನ್ನ ಸಂಬಂಧಿಕ ರೊಬ್ಬರೊಡನೆ ವೇದೋಕ್ತವಾಗಿ ಮದುವೆ ಮಾಡಿಸಿ ಮೊದಲು ಬಂದಿದ್ದ ಧನಿಕ ವರನನ್ನು ಅವನು ಕೊಟ್ಟಿದ್ದ ಹಣವನ್ನು ಅವನಿಗೇ ಹಿಂತಿರುಗಿಸಿ ಕಳುಹಿಸಿಕೊಡುತ್ತಾನೆ. ಈ ಅಧ್ಯಾಯದಲ್ಲಿ ಲೇಖಕರು ತಮಿಳುನಾಡಿನಲ್ಲಿ ಅಂದು ನಡೆಯುತ್ತಿದ್ದ ಬ್ರಾಹ್ಮಣ ವಿರೋಧಿ ಚಟುವಟಿಕೆಯನ್ನು ಮನಃಪೂರ್ವಕವಾಗಿ ಸೇರಿಸಿರುವಂತೆ ತೋರುತ್ತದೆ. ಮುಸಲ್ಮಾನ ಹೆಂಗಸೊಬ್ಬಳು ಜಾನಕಿಗೆ ತಪ್ಪಿಸಿಕೊಳ್ಳಲು ಸಹಾಯ ಮಾಡುವುದರ ಮೂಲಕ ಹಿಂದೂ-ಮುಸ್ಲಿಂ ಬಾಂಧವ್ಯವನ್ನು ಎತ್ತಿ ಹಿಡಿದಿದ್ದಾರೆ.

ಮಂಗದವಲ್ಲಿ ಮತ್ತು ತಿರುಮಣಮ್ ಎಂಬ ಮತ್ತೆರಡು ಕಾದಂಬರಿಗಳನ್ನು ಅವರು ರಚಿಸಿದ್ದಾರೆ. ಆದರೆ ಅವು 'ಬೆಟ್ಟದ ಕಳ್ಳ'ದಲ್ಲಿರುವಂತೆ ಉತ್ತಮ ಕಥಾವಸ್ತು, ಪಾತ್ರಗಳು, ಕಥನ ವಿಧಾನದ ಕೊರತೆಯಿಂದಾಗಿ ಹೆಚ್ಚು ಜನಪ್ರಿಯತೆ ಪಡೆದು ಕೊಂಡಿಲ್ಲ, ಆದರೆ ಕುತೂಹಲಕಾರಿಯಾಗಿ ಓದಿಸಿಕೊಳ್ಳುತ್ತವೆ.

## ನಾಟಕಗಳು

ಕವಿ ರಾಮಲಿಂಗಮ್ ಅವರು ತಮಿಳು ನಾಟಕ ಸಾಹಿತ್ಯಕ್ಕೆ ತಮ್ಮ ಕೊಡುಗೆ ಯನ್ನು ನೀಡಿದ್ದಾರೆ. 1924 ರಷ್ಟು ಮುಂಚಿತವಾಗಿಯೇ 'ಅರವನೈ ಸುಂದರಮ್' ಎಂಬ ಒಂದು ನಾಟಕವನ್ನು ರಚಿಸಿದರು. ಅದನ್ನು ಆರೋಗ್ಯ ಸಪ್ತಾಹದ ಸಮಾರಂಭ ದಲ್ಲಿ ಪ್ರದರ್ಶಿಸಲಾಯಿತು. ಈ ನಾಟಕ ಸಾರ್ವಜನಿಕರು ಪ್ಲೇಗ್ ಮುಂತಾದ ಮಾರಕ ರೋಗಗಳು ಬಂದಾಗ ಹೇಗೆ ಜನಾರೋಗ್ಯ ಹಾಗೂ ರೋಗರುಜಿನಗಳ ಬಗೆಗೆ ಮುಂಜಾಗರೂಕತೆ ವಹಿಸಬೇಕೆಂಬುದರ ತಿಳುವಳಿಕೆ ನೀಡಿತು. ಹನೀಫಾ ಎಂಬ ಮುಸಲ್ಮಾನ ಧಾರ್ಮಿಕನ ಪಾತ್ರವನ್ನು ನಾಟಕದಲ್ಲಿ ಅಳವಡಿಸುವುದರ ಮೂಲಕ ಹಿಂದೂ-ಮುಸ್ಲಿಂ ಬಾಂಧವ್ಯವನ್ನು ಸಹ ಎತ್ತಿ ಹಿಡಿಯಲಾಗಿದೆ.

'ಮಾಮನ್ ಮಗಳ್' ಅವರ ಎರಡನೆಯ ನಾಟಕ. ಇದು ಚಲಚ್ಚಿತ್ರಕ್ಕಾಗಿಯೇ ಬರೆಯಲಾಯಿತಾದರೂ ನಿರ್ಮಾಪಕರ ಹಾಗೂ ನಾಟಕಕಾರರ ವೈಮನಸ್ಯದ ಪರಿಣಾಮ ವಾಗಿ ಅದು ಚಲಚ್ಚಿತ್ರವಾಗಲಿಲ್ಲ. ಕಥಾವಸ್ತು ಹಿಂಸಾತ್ಮಕ ಕ್ರಾಂತಿಯಿಂದುಂಟಾಗುವ ದುಷ್ಪರಿಣಾಮಗಳನ್ನು ಕುರಿತು ಬೆಳಕು ಬೀರುತ್ತದೆ. ಧನಿಕ ಒಡೆಯರು ತಾವಾಗಿಯೇ ಮುಂದೆ ಬಂದು ತಮ್ಮಲ್ಲಿರುವ ಸಂಪತ್ತನ್ನು, ಲಾಭಾಂಶವನ್ನು ಬಡ ಕಾರ್ಮಿಕರಿಗೆ ಹಂಚುವ ವಿಧಾನವನ್ನು ಅವರು ಇಲ್ಲಿ ಒತ್ತಿ ಹೇಳುತ್ತಾರೆ.

ನೆಲ್ಲಿಯಪ್ಪರ್ ಧನಿಕ ಗಿರಣಿ ಮಾಲೀಕ. ಕಾರ್ಮಿಕರ ರಕ್ತಹೀರಿ ಹೇರಳ ಧನ ಸಂಪಾದನೆ ಮಾಡಿದವನು. ಸುಂದರಮ್ ಒಬ್ಬ ಗುಮಾಸ್ತ. ತನ್ನ ಮಗಳು ವಸಂತಳೊಡನೆ ನಿಕಟ ಸಂಪರ್ಕ ಪಡೆದಿದ್ದಾನೆಂದು ತಿಳಿದು ನೆಲ್ಲಿಯಪ್ಪ ಅವನನ್ನು ಕೆಲಸದಿಂದ ವಜಾ ಮಾಡುತ್ತಾನೆ. ಅವನು ವೀರಪ್ಪನ್ ಎಂಬ ವಿದೇಶಕ್ಕೆ ಹೋಗಿ ಬಂದಿದ್ದ ಒಬ್ಬ ಕಮ್ಯೂನಿಸ್ಟ್ ನಾಯಕನೊಡನೆ ಸೇರುತ್ತಾನೆ. ನೆಲ್ಲಿಯಪ್ಪನ ಮನಃಪರಿವರ್ತನೆಗೆ ಅಸಹಕಾರ ಹಾಗೂ ಅಹಿಂಸಾ ಮಾರ್ಗದ ಚಳುವಳಿಯನ್ನು ಪ್ರಾರಂಭಿಸುವಂತೆ ಅವನಿಗೆ ಪ್ರೋತ್ಸಾಹ ನೀಡುತ್ತಾನೆ. ಚಳುವಳಿಯನ್ನು ಪ್ರಾರಂಭಿಸುವಂತೆ ಅವನಿಗೆ ಪ್ರೋತ್ಸಾಹ ನೀಡುತ್ತಾನೆ. ಆದರೆ ಕೆಲವು ಸ್ವಹಿತಾಸಕ್ತ ಗೂಂಡಾಗಳು ನೆಲ್ಲಿಯಪ್ಪನ ಆಸ್ತಿಯನ್ನು ದೋಚಬೇಕೆಂದು ಹಾಗೂ ಅವನ ಮಗಳನ್ನು ಅಪಹರಿಸಬೇಕೆಂಬ ದುರಾಸೆಯಿಂದ ಇವರ ಪ್ರಯತ್ನ ವಿಫಲವಾಗುತ್ತದೆ. ಗೂಂಡಾಗಳಿಂದ ತಲೆತಪ್ಪಿಸಿಕೊಳ್ಳಲು ಸುಂದರಮ್ ನೆಲ್ಲಿಯಪ್ಪನಿಗೆ ಸಹಾಯ ಮಾಡುತ್ತಾನೆ. ನೆಲ್ಲಿಯಪ್ಪ ತನ್ನ ಮಗಳು ವಸಂತಳನ್ನು ಸುಂದರಮ್‌ಗೆ ಮದುವೆ ಮಾಡಲು ಮುಂದೆ ಬರುತ್ತಾನೆ. ಆದರೆ ಸುಂದರಮ್ ಅದನ್ನು ನಿರಾಕರಿಸಿ ಅವಳು ಮನಸಾರೆ ಮೆಚ್ಚಿದ್ದ ತನ್ನಂತೆಯೇ ಗಿರಣಿಯ ಕೆಲಸದಿಂದ ವಜಾ ಆಗಿ ಅಮೇರಿಕಕ್ಕೆ ಉನ್ನತ ವ್ಯಾಸಂಗಕ್ಕೆ ಹೋಗಿದ್ದ ಮೋಹನ್ ಎಂಬುವನೊಡನೆ ಮದುವೆಯಾಗಲು ಸಹಾಯ ಮಾಡುತ್ತಾನೆ. ವಸಂತಳೊಡನೆ ಸುಂದರಮ್‌ಗೆ ಇದ್ದ ಸಂಬಂಧ ಏನಿದ್ದರೂ ಕೇವಲ ಸ್ನೇಹ ಮಾತ್ರವಾಗಿತ್ತು. ಅದನ್ನು ಎಲ್ಲರೂ ತಪ್ಪಾಗಿ ತಿಳಿದಿದ್ದರು.

ತನ್ನ ಮಾವನ ಮಗಳನ್ನು ಮದುವೆಯಾಗಲು ಹಿಂದು ಮುಂದು ನೋಡುತ್ತಿದ್ದ ಸುಂದರಮ್ ಕೊನೆಗೆ ತನ್ನ ಸಮ್ಮತಿಯನ್ನು ಕೊಡುತ್ತಾನೆ. ಆದ್ದರಿಂದಲೇ ನಾಟಕದ ಹೆಸರು ಮಾವನ ಮಗಳು. ನೆಲ್ಲಿಯಪ್ಪನು ತನ್ನ ಮಗಳು ವಸಂತಳ ಮದುವೆ ಮೋಹನ್‌ನೊಡನೆ ಹಾಗೂ ಸುಂದರಮ್‌ನ ಮದುವೆ ಅವನ ಮಾವನ ಮಗಳ ಜೊತೆಯಲ್ಲಿ ತನ್ನ ಮನೆಯಲ್ಲಿಯೇ ನಡೆಯುವಂತೆ ಏರ್ಪಡಿಸುತ್ತಾನೆ. ಮದುವೆಯ ಮಂಟಪದಲ್ಲಿಯೇ ತನ್ನ ಸಂಪತ್ತನ್ನು ಕಾರ್ಮಿಕರಿಗೆ, ಬಂಧುಗಳಿಗೆ, ಹಿತೈಷಿಗಳಿಗೆ ಹಂಚುವುದಾಗಿ ಪ್ರಕಟಿಸುತ್ತಾನೆ. ಹೀಗೆ ಸರ್ವೋದಯ ತತ್ವವನ್ನು ಪ್ರಸ್ತಾಪಿಸುತ್ತಾರೆ. ಪ್ರತಿಯೊಬ್ಬ ಧನಿಕನೂ ತನ್ನ ಸಂಪತ್ತನ್ನು ತಾನಾಗಿಯೇ ಮುಂದೆ ಬಂದು ಬಡ ಕಾರ್ಮಿಕರಿಗೆ ಹಂಚಲಿ. ಇದು ಅವರು ಹತಾಶರಾಗಿ ಹಿಂಸಾತ್ಮಕ ಮಾರ್ಗವನ್ನು ಹಿಡಿಯುವ, ಬಂಡೇಳುವ ಮೊದಲೇ ಆಗಬೇಕು ಎಂದು ಎಚ್ಚರಿಸುತ್ತಾರೆ. ಗಾಂಧೀಜಿಯವರಿಗೆ ಮೆಚ್ಚುಗೆಯಾಗಿದ್ದ ಧರ್ಮಕರ್ತಾ ಪದ್ಧತಿ (Trusteeship system)ಯನ್ನು ಪ್ರತಿಪಾದಿಸುವ ಹಿನ್ನೆಲೆಯಲ್ಲಿ ರಚಿತವಾದ ನಾಟಕ ಇದು.

## ಪ್ರಬಂಧಗಳು

ಕವಿ ರಾಮಲಿಂಗಮ್ ಅವರು ಒಬ್ಬ ಒಳ್ಳೆಯ ಪ್ರಬಂಧಕಾರರೂ ಹೌದು.

ಅವರ ಪ್ರಬಂಧಗಳು ತಾರ್ಕಿಕವೂ, ನಿಶ್ಚಿತ ಅಭಿಪ್ರಾಯಗಳೂ ಹಾಗೂ ತಿಳಿಯಾದ ಶೈಲಿಯಿಂದಲೂ ಕೂಡಿವೆ.

'ತಮಿಳ್ ಮೊಳಿಯುಮ್ ತಮಿಳು ಅರಸುಮ್' ಎಂಬ ಪುಸ್ತಕದಲ್ಲಿ ತಮಿಳು ಭಾಷೆಯ ಹುಟ್ಟು ಹಾಗೂ ಬೆಳವಣಿಗೆಯನ್ನು ಕುರಿತ ಲೇಖನಗಳಿವೆ. ತಮಿಳಿನ ಪ್ರಾಚೀನತೆಯನ್ನೂ ಅವರು ಒತ್ತಿ ಹೇಳುತ್ತಾರೆ. ಅದೇ ಸಮಯದಲ್ಲಿ ಸಂಸ್ಕೃತ ಪದಗಳನ್ನು ಹಾಗೂ ವಿದೇಶಿ ಪದಗಳನ್ನು ಭಾಷೆಯಲ್ಲಿ ಬಳಸಿಕೊಳ್ಳಬಾರದೆಂದು ವಾದಿಸುವ ತಮಿಳು ಮಡಿವಂತಿಕೆಯವರ ನಿಲುವನ್ನು ಖಂಡಿಸುತ್ತಾರೆ. ತಮಿಳು ಭಾಷೆಯು ಆಧುನಿಕ ಭಾಷೆಯಾಗಿ ಬೆಳೆಯಬೇಕಾದರೆ, ವೈಜ್ಞಾನಿಕ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಸಹಾಯಕವಾಗುವಂತೆ ಎಲ್ಲಾ ಭಾಷೆಗಳಿಂದ ಪದಗಳನ್ನು ಮಾತ್ರವಲ್ಲದೆ ಅಭಿಪ್ರಾಯಗಳನ್ನು ಸಹ ಸ್ವೀಕರಿಸಿ ಭಾಷೆಯಲ್ಲಿ ಸೇರಿಸಿಕೊಳ್ಳಬೇಕು ಎಂದು ವಾದಿಸಿದ್ದಾರೆ.

ದ್ರಾವಿಡರು ಹಾಗೂ ಆರ್ಯರು ಎಂಬ ಪ್ರಬಂಧದಲ್ಲಿ ತಮಿಳುನಾಡಿನಲ್ಲಿ ಪ್ರಚಲಿತವಿರುವ 'ಬ್ರಾಹ್ಮಣರೆಲ್ಲಾ ಆರ್ಯರು, ಬ್ರಾಹ್ಮಣೇತರರೆಲ್ಲಾ ದ್ರಾವಿಡರು' ಎಂಬ ಅಭಿಪ್ರಾಯವನ್ನು ಪರಿಹಾಸ್ಯ ಮಾಡುತ್ತಾರೆ. ಬ್ರಾಹ್ಮಣ, ಅಬ್ರಾಹ್ಮಣರು ಮೂಲತಃ ತಮಿಳುನಾಡಿನವರು ಇದ್ದಾರೆ ಎಂದು ಅವರು ವಾದಿಸುತ್ತಾರೆ. ವಾಂಶಿಕವಾಗಿ ಅವರು ಒಂದೇ ಕುಲಕ್ಕೆ ಸೇರಿದ್ದರೂ ಸಾಂಸ್ಕೃತಿಕವಾಗಿ ಬ್ರಾಹ್ಮಣರು ಸಂಸ್ಕೃತ ಭಾಷೆಯನ್ನೂ ವೇದಾದಿ ಧರ್ಮಗ್ರಂಥಗಳನ್ನೂ ಆರ್ಯಪರಂಪರೆಯನ್ನೂ ಕೊಂಡಾಡುತ್ತಾರೆ. ಅದು ಅವರ ತಪ್ಪಲ್ಲ, ತಮಿಳು ರಾಜರು ವೇದಾಧ್ಯಯನ ನಡೆಸಲು ಅವರಿಗೆ ಕರರಹಿತ ನೆಲವನ್ನು ಕೊಟ್ಟು ವೇದಪಾಠಗಳನ್ನು ಹೊಸದಾಗಿ ಕಟ್ಟಲಾದ ದೇವಾಲಯಗಳಲ್ಲಿ ಪಠಿಸಲು ಪ್ರೋತ್ಸಾಹಿಸಿದರು. ಸಂಸ್ಕೃತ ಧರ್ಮಗ್ರಂಥಗಳನ್ನು ಸತತವಾಗಿ ಅಭ್ಯಾಸ ನಡೆಸಿದ ಅವರು ಸಹಜವಾಗಿಯೇ ಆ ಸಂಸ್ಕೃತಿಯಂತೆಯೇ ನಡೆನುಡಿಗಳನ್ನು ಆಚರಣೆಗೆ ತಂದುಕೊಂಡರು. ಹೀಗಾಗಿ ತಮಿಳು ಮಾತನಾಡುವ ಗುಂಪಿನವರ ನಡೆನುಡಿಯಿಂದ ಅವರು ತೀರಾ ಭಿನ್ನರಾಗತೊಡಗಿದರು. ಬ್ರಾಹ್ಮಣೇತರರು ತಮಿಳು ಸಾಹಿತ್ಯವನ್ನು ಅಧ್ಯಯನ ಮಾಡಿದರು. ಅದೇ ಸಂಸ್ಕೃತಿಯನ್ನು ರೂಢಿಗೆ ತಂದುಕೊಂಡರು. ವಾಸ್ತವವಾಗಿ ತಮಿಳು ಸಂಸ್ಕೃತಿಯೆಂಬುದು ದೇಶೀಯರ ಮೂಲ ಸಂಸ್ಕೃತಿಯೊಡನೆ ಆರ್ಯ ಸಂಸ್ಕೃತಿಯ ಒಳ್ಳೆಯ ವಿಚಾರಗಳನ್ನು ಒಳಗೊಂಡಿರುವ ಒಂದು ಮಿಶ್ರಣ. ಆದ್ದರಿಂದ ತಮಿಳು ಸಂಸ್ಕೃತಿಯು ಪರಿಶುದ್ಧವಾದುದು ಎಂದು ವಾದಿಸುವುದರಲ್ಲಿ ಅರ್ಥವಿಲ್ಲ. ಬ್ರಾಹ್ಮಣ, ಬ್ರಾಹ್ಮಣೇತರರು ದ್ವೇಷಾಸೂಯೆಗಳನ್ನು ದೂರಮಾಡಿ ಪರಸ್ಪರ ಪ್ರೀತಿಸಬೇಕು, ಸೌಹಾರ್ದದಿಂದಿರಬೇಕು ಎಂದು ಅವರು ಕರೆಕೊಟ್ಟಿದ್ದಾರೆ.

ತಮಿಳು ಸಂಸ್ಕೃತಿಯನ್ನು ಕುರಿತು ವಿಸ್ತರಿಸಿ ಬರೆಯುತ್ತಾ ಇನ್ನೊಂದು ಪ್ರಬಂಧದಲ್ಲಿ ಅವರು ತಮಿಳು ಸಂಸ್ಕೃತಿಯ ಪ್ರತ್ಯೇಕತೆಯನ್ನು ಹೇಳುತ್ತಾರೆ. ಒಬ್ಬ ಸನ್ಯಾಸಿಯ ಜೀವನಕ್ಕಿಂತಲೂ ಗೃಹಸ್ಥನ ಜೀವನವನ್ನು ಎತ್ತಿಹಿಡಿದಿದ್ದಾರೆ. ಚತುರ್ವರ್ಣಗಳನ್ನು

ಹುಟ್ಟಿನಿಂದ ನಿರ್ಧರಿಸುವುದನ್ನೂ, ಮೇಲು ಕೀಳು ಅದರ ಮೂಲಕ ನಿರ್ಧರಿಸುವುದನ್ನು ಅವರು ಖಂಡಿಸುತ್ತಾರೆ. ಮೇಲು ಕೀಳು ಏನಿದ್ದರೂ ಅವರ ಗುಣ, ವಿದ್ಯಾಭ್ಯಾಸ ಇವುಗಳ ಮಟ್ಟವನ್ನು ಅಳೆದು ನಿರ್ಧರಿಸಬೇಕೇ ಹೊರತು ಸಮಾಜದಲ್ಲಿ ಹುಟ್ಟಿನಿಂದ ನಿರ್ಧರಿಸಬಾರದು ಎಂದು ಅವರು ಬಲವಾಗಿ ವಾದಿಸುತ್ತಾರೆ. ತಮಿಳು ಸಂಸ್ಕೃತಿಯ ಪ್ರತ್ಯೇಕತೆ ಏನಿದ್ದರೂ ಶೌರ್ಯ, ಮನೋಧೈರ್ಯ, ಅನ್ಯಮತ ಸಹಿಷ್ಣುತೆ, ಆಸ್ತಿಕತೆ, ಸತ್ಯ ಹಾಗೂ ಅನ್ಯಜೀವಿಗಳೊಡನೆ ಕರುಣೆಯಿಂದಿರುವ ಯತ್ನ–ಇವುಗಳಲ್ಲಿ ಅಡಗಿದೆ ಎಂದು ಅವರು ತೀರ್ಮಾನಿಸುತ್ತಾರೆ.

'ತೇಮದುರ ತಮಿಳ್ ಓಸೈ' (ಜೇನುಮಾಧುರ ತಮಿಳು) ಹಾಗೂ 'ಕವಿಙ್ಞಾನ್ ಕುರಲ್' (ಕವಿಯ ಧ್ವನಿ) ಎಂಬ ಪ್ರಬಂಧಗಳಲ್ಲಿಯೂ ಬಹುಮಟ್ಟಿಗೆ ಹಿಂದೆ ಹೇಳಿದ ವಿಷಯಗಳನ್ನೇ ಕುರಿತು ಪ್ರಸ್ತಾಪಿಸಿದ್ದಾರೆ.

'ತಾಯಾರ್ ಕೊಡುತ್ತ ಧನಮ್' (ತಾಯಿ ನೀಡಿದ ಸಂಪತ್ತು) ಅನೇಕ ಸಾಹಿತ್ಯಕ ಪ್ರಬಂಧಗಳನ್ನು ಹೊಂದಿದೆ. ಸದಾ ಸತ್ಯವನ್ನೇ ನುಡಿಯಬೇಕೆಂಬುದೂ ದುಷ್ಟರಿಂದ ದೂರವಿರುವಂತೆ ತಮ್ಮ ತಾಯಿಯ ಹಿತವಚನ ಹೇಗೆ ಜೀವನಪರ್ಯಂತ ತಮಗೆ ಸಂಪತ್ತಿನಂತೆ ಕಾಪಾಡಿದೆ ಎಂಬುದನ್ನು ಅವರು ಒತ್ತಿಹೇಳಿದ್ದಾರೆ. ಮತ್ತೊಂದು ಪ್ರಬಂಧದಲ್ಲಿ ತಮಿಳು ಗಾದೆಗಳಲ್ಲಿ ಹಾಗೂ ನುಡಿಗಟ್ಟುಗಳಲ್ಲಿ ಅಡಗಿರುವ ನಿಜವಾದ ಅರ್ಥವನ್ನು ತಾವು ಹೇಗೆ ಪುರಾತನ ಶಿಲಾಶಾಸನಗಳಿಂದ ಹಾಗೂ ಕೆಲವು ಇಂಗ್ಲಿಷ್ ಪತ್ರಿಕೆಗಳಿಂದ ತಿಳಿದುಕೊಂಡರೆಂಬ ವಿಚಾರವನ್ನು ತಿಳಿಸುತ್ತಾರೆ. ಉದಾಹರಣೆಗೆ ಕಂಬ ರಾಮಾಯಣದಲ್ಲಿ ಮಂಥರೆಯು ಭರತನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಲು ಕೈಕೇಯಿಗೆ ಹಿತವಾದ ನುಡಿದಾಗ ಕೈಕೇಯಿಯು ಅದು ಸೂರ್ಯಕುಲದ ಪದ್ಧತಿಗೆ ವಿರುದ್ಧವಾದುದೆಂದು ತಿಳಿಸುತ್ತಾಳೆ. ಅಂದರೆ ಕಿರೀಟವನ್ನಿಡಲು ನವಿಲನ್ನು ಅನುಸರಿಸು ತ್ತಾರೆ. ಕವಿವರ್ಯರಿಗೆ ನವಿಲಿನ ಪದ್ಧತಿ ಏನೆಂದು ತಕ್ಷಣ ಅರ್ಥವಾಗಲಿಲ್ಲ. ಕೊನೆಗೆ ಯಾವುದೋ ಜೀವಶಾಸ್ತ್ರಕ್ಕೆ ಸಂಬಂಧಿಸಿದ ಇಂಗ್ಲಿಷ್ ಪತ್ರಿಕೆಯೊಂದನ್ನು ಓದುತ್ತಿದ್ದಾಗ ಅದರ ನಿಜವಾದ ಅರ್ಥ ತಿಳಿಯಿತು. ತಾಯಿ ನವಿಲಿನ ಎದುರಿನಲ್ಲಿ ಅತ್ಯಂತ ಹಿರಿಯ ಮರಿ ಮೊಟ್ಟಮೊದಲು ತನ್ನ ಗರಿಯನ್ನು ಬಿಚ್ಚಿ ಕುಣಿಯಲು ಮೊದಲು ಮಾಡುತ್ತದೆ. ಉಳಿದವು ಅನಂತರ ಹಿರಿಯ ನವಿಲನ್ನು ಅನುಸರಿಸುತ್ತವೆ. ಹಾಗೆಯೇ ರಾಜನ ಅತ್ಯಂತ ಹಿರಿಯ ಮಗನು ಮೊದಲು ಕಿರೀಟವನ್ನು ಧರಿಸಬೇಕು.

'ತಮಿಳ್ ಇಸೈ' (ತಮಿಳು ಸಂಗೀತ) ಎಂಬ ಪ್ರಬಂಧದಲ್ಲಿ ತಮಿಳು ಸಂಗೀತದ ಪ್ರಾಚೀನತೆಯನ್ನು ಬೊಟ್ಟುಮಾಡಿ ತೋರಿಸಿ ಸಂಗೀತ ಕಚೇರಿಗಳಲ್ಲಿ ತೆಲುಗು, ಸಂಸ್ಕೃತ ಭಾಷೆಗಳಿಗೆ ಪ್ರಾಧಾನ್ಯ ನೀಡುವುದನ್ನು ಆಕ್ಷೇಪಿಸಿ ತಮಿಳು ಭಾಷೆಯ ಹಾಡುಗಳಿಗೆ ಪ್ರಾಧಾನ್ಯ ನೀಡಬೇಕೆಂದು ಹೇಳುತ್ತಾರೆ.

'ದೇಶಭಕ್ತರ್ ಮೂವರ್' (ಮೂವರು ದೇಶಭಕ್ತರು) ಎಂಬ ಗ್ರಂಥದಲ್ಲಿ

ವಿ. ಜಿ. ಚಿದಂಬರಮ್ ಪಿಳ್ಳೈ, ಎಸ್. ಸತ್ಯಮೂರ್ತಿ ಹಾಗೂ ಎಮ್. ವಿ. ಶಿವಜ್ಞಾನ ಗ್ರಾಮಣಿಯಾರ್ ಇವರ ವಿಶೇಷ ಗುಣಗಳನ್ನು ಚಿತ್ರಿಸಿದ್ದಾರೆ.

**ಆತ್ಮಚರಿತ್ರೆ :**

ಕವಿವರ್ಯರು ಪಿಳ್ಳೆಯು ಆತ್ಮಚರಿತ್ರಕಾರರಾಗಿಯೂ ಹೆಸರು ಪಡೆದಿದ್ದಾರೆ. ಅವರ ಆತ್ಮಚರಿತ್ರೆ ಒಂದು ಆತ್ಮಕಥನದಂತಲ್ಲದೆ ಕಾದಂಬರಿಯಂತೆ ಓದಿಸಿಕೊಂಡು ಹೋಗುತ್ತದೆ. ಅವರ ಜೀವನದ ಒಂದೊಂದು ಘಟನೆಯೂ ಪ್ರತ್ಯೇಕತೆಯಂತೆ ಚಿತ್ರಿತವಾಗಿರುವುದರಿಂದ ಅತ್ಯಂತ ಕುತೂಹಲಕಾರಿಯಾಗಿ ಓದುವಂತೆ ಮಾಡಿದೆ. ಜೀವನ ಚಿತ್ರಣದಲ್ಲಿ ಅವರು ಕಾಲಾನುಕ್ರಮವನ್ನು ಅನುಸರಿಸುವುದಿಲ್ಲ. ಅನಾವಶ್ಯಕ ವಿವರಗಳನ್ನು ನೀಡಿ ಅವರು ಬೇಸರಪಡಿಸುವುದಿಲ್ಲ. ಥಾಮಸ್ ಕಾರ್ಲೈಲ್ ಅವರ ಅಭಿಪ್ರಾಯ, 'ಆತ್ಮಚರಿತ್ರೆಯ ಮುಖ್ಯ ಲಕ್ಷಣವೆಂದರೆ ಸತ್ಯಸಂಧತೆಯನ್ನು ಚಾಚೂ ತಪ್ಪದಂತೆ ಪರಿಪಾಲಿಸುವುದು' ಎಂಬಂತೆ ಪಾತ್ರದ ಎಲ್ಲಾ ಗುಣಾವಗುಣಗಳನ್ನು ಅವರು ಚಿತ್ರಿಸಿದ್ದಾರೆ. ಶಾಲೆಯಲ್ಲಿ ಉಪಾಧ್ಯಾಯರನ್ನು ಮೋಸಗೊಳಿಸುವ ಪ್ರಯತ್ನ, ಮೊದಲನೆಯ ಹೆಂಡತಿಯನ್ನು ಅನಾದರದಿಂದ ಕಂಡ ರೀತಿ, ಮಾಂಸಾಹಾರವನ್ನು ಸೇವಿಸುವುದಿಲ್ಲವೆಂಬ ವ್ರತವನ್ನು ಪಾಲಿಸಲು ಸಾಧ್ಯವಾಗದ ವಿಚಾರ ಮುಂತಾದವುಗಳನ್ನು ಅವರು ಬಿಚ್ಚು ಮನಸ್ಸಿನಿಂದ ಹೇಳಿದ್ದಾರೆ. ಗಾಂಧೀಜಿಯವರು ಹೇಳುವಂತೆ ತಮ್ಮ ತಪ್ಪುಗಳನ್ನು ಅವರು ಒಪ್ಪಿಕೊಳ್ಳಲು ಹಿಂಜರಿಯುವುದಿಲ್ಲ. ಹಣಕಾಸು ವ್ಯವಹಾರಗಳನ್ನು ನಿಭಾಯಿಸಲು ಅವರ ಅಸಾಮರ್ಥ್ಯವನ್ನು ಒಪ್ಪಿಕೊಂಡು, ಅದರಿಂದ ತಾವು ಅನೇಕ ಸಂದರ್ಭಗಳಲ್ಲಿ ತೊಂದರೆಪಡಬೇಕಾಗಿಬಂದುದನ್ನೂ ಅವರು ಒಪ್ಪಿಕೊಳ್ಳುತ್ತಾರೆ.

**ಅನುವಾದಗಳು :**

ಕವಿವರ್ಯರು ಕೆಲವು ಅನುವಾದಗಳನ್ನು ಮಾಡಿದ್ದಾರೆ. ಗಾಂಧೀಜಿಯವರು ಕೋರ್ಟಿನಲ್ಲಿ ಕೊಟ್ಟಿರುವ ಹೇಳಿಕೆಗಳನ್ನು, ಎಸ್. ಎನ್. ಅಗರವಾಲ ಅವರ 'ಗಾಂಧಿಯನ್ ಪಾಲಿಟಿ' ಇವುಗಳನ್ನು ಇಂಗ್ಲಿಷಿನಿಂದ ತಮಿಳಿಗೆ ಅನುವಾದ ಮಾಡಿದ್ದಾರೆ. ಈ ಅನುವಾದದಲ್ಲಿ ಅವರು ಪದಸಹಿತ ಅನುವಾದದ ಮಾರ್ಗವನ್ನು ಹಿಡಿಯದೆ ಮುಖ್ಯವಾಗಿ ಮೂಲಕೃತಿಯಲ್ಲಿರುವ ಭಾವವನ್ನು ಸುಲಭವಾಗಿ ಅರ್ಥವಾಗುವಂತೆ ತಮಿಳು ನುಡಿಗಟ್ಟುಗಳನ್ನು ಬಳಸಿ ಭಾವಾನುವಾದವನ್ನು ಮಾಡಿದ್ದಾರೆ. ಶಂಕರರ ಭಜಗೋವಿಂದಮ್ ಹಾಗೂ ಭಗವದ್ಗೀತೆಯ ಸಾಂಖ್ಯಯೋಗ ಭಾಗವನ್ನು ಸಂಸ್ಕೃತದಿಂದ ತಮಿಳಿಗೆ ಪದ್ಯಾನುವಾದ ಮಾಡಿದ್ದಾರೆ.

**ವ್ಯಾಖ್ಯಾನ ಮತ್ತು ಸಾಹಿತ್ಯ ವಿಮರ್ಶೆ :**

ಸೆರೆಮನೆಯಲ್ಲಿರುವಾಗ ನಮ್ಮ ಕವಿವರ್ಯರು ಅವರ ಸಹ ಸೆರೆವಾಸಿಗಳ

ಉಪಯೋಗಕ್ಕಾಗಿ ತಿರುಕ್ಕುರಳಿನ ಬಗೆಗೆ ಭಾಷಣಗಳನ್ನು ಮಾಡುತ್ತಿದ್ದರು. ಆ ಸಮಯದಲ್ಲಿ ಅತ್ಯಂತ ಜನಪ್ರಿಯವೂ ಪ್ರಾಮಾಣಿಕವಾದುದೂ ಆದ ಪರಿಮೇಲಳಗರ್ ತಿರುಕ್ಕುರಳನ್ನು ಕುರಿತು ಬರೆದ ವ್ಯಾಖ್ಯಾನವನ್ನು ಅವರು ಅವಲಂಬಿಸಿದರು. ಈ ಸಂದರ್ಭದಲ್ಲಿ ಕೆಲವು ಚುರುಕು ಬುದ್ಧಿಯ ಕೇಳುಗರು ಹಾಕಿದ ಪ್ರಶ್ನೆಗಳಿಗೆ ಸಮಾಧಾನ ಕರವಾದ ಉತ್ತರವನ್ನು ನೀಡಲು ಅವರಿಗೆ ಸಾಧ್ಯವಾಗಿರಲಿಲ್ಲ. ಆದ್ದರಿಂದ ತಮ್ಮದೇ ಆದ ಒಂದು ವ್ಯಾಖ್ಯಾನವನ್ನು ಸಾಮಾನ್ಯಜ್ಞಾನ ದೃಷ್ಟಿಯಲ್ಲಿ ಬರೆಯುವುದು ಸೂಕ್ತ ವೆಂದು ಅವರಿಗೆ ತೋರಿತು. ಹೀಗಾಗಿ 1932 ರಲ್ಲಿ ತಿರುಕ್ಕುರಳಿಗೆ ವ್ಯಾಖ್ಯಾನವನ್ನು ಬರೆಯಲು ಪ್ರಾರಂಭಿಸಿ ಕೆಲವಾರು ವರ್ಷಗಳು ತಾಳ್ಮೆಯಿಂದ ಪರಿಶೋಧಿಸಿ ಅದನ್ನು ಮುಗಿಸಿದರು. 1954 ರಲ್ಲಿ ಅದು ಮೊದಲು ಪ್ರಕಟವಾಗಿ ವಿದ್ವಾಂಸರ ಮೆಚ್ಚುಗೆ ಪಡೆಯಿತು.

ಪ್ರಸಿದ್ಧ ತಮಿಳು ವಿದ್ವಾಂಸ ತಿರು ವಿ. ಕಲ್ಯಾಣಸುಂದರ ಮುದಲಿಯಾರ್ ಅವರು ಹೇಳುತ್ತಾರೆ, "ಹೊಸ ವ್ಯಾಖ್ಯಾನ ಹಳೆಯದನ್ನು ಅಲ್ಲಗಳೆಯುವುದಿಲ್ಲ; ಹೊಸ ವಿಧಾನಕ್ಕೆ ಒಂದು ಆಧಾರವಾಗಿದೆ; ಇಂದಿನ ಮನೋಭಾವಕ್ಕೆ ತಕ್ಕ ಹಾಗಿದೆ. ಗಾಂಧೀಜಿಯವರ ಅಭಿರುಚಿ ವ್ಯಾಖ್ಯಾನದುದ್ದಕ್ಕೂ ಹೆಚ್ಚಾಗಿ ಕಾಣುತ್ತೇವೆ. ಇದು ನಮ್ಮ ನಾಡನ್ನು ರಕ್ಷಿಸುತ್ತದೆ." ಶ್ರೀ ಪೆರಿಯಸ್ವಾಮಿ ತೂರನ್ ಹೇಳುತ್ತಾರೆ: ಈ ವ್ಯಾಖ್ಯಾನವು ಓದುಗರನ್ನು ಆಲೋಚನಾಶೀಲರಾಗುವಂತೆ ಕೆರಳಿಸುತ್ತದೆ, ಕುರಳನ್ನು ಬೇರಾವ ಲೇಖಕರೂ ನಡೆಯದ ದಾರಿಯಲ್ಲಿ ನೇರವಾಗಿ ಅರ್ಥೈಸಲು ಅನುಕೂಲ ಮಾಡುತ್ತದೆ. ಪ್ರೊ॥ ಆರ್.ವಿ. ಸೇತುಪಿಳ್ಳೆ ಅವರು ಹೇಳುತ್ತಾರೆ: ನಮ್ಮ ಕವಿವರ್ಯರು ತಿರುಕ್ಕುರಳ್ ಕರ್ತೃವಿನ ನಾಡಿಯನ್ನು ಹಿಡಿದು ನಡೆದಿದ್ದಾರೆ, ಧರ್ಮ, ಜಾತಿ ಹಾಗೂ ರಾಜಕೀಯ ಮುಂತಾದವನ್ನು ಪೂರ್ವಾಗ್ರಹಗಳಿಗೆ ವಶವಾಗದೆ ನಿಷ್ಪಕ್ಷಪಾತವಾಗಿ ತಕ್ಕಡಿಯಲ್ಲಿ ತೂಗುವಂತೆ ಈ ವ್ಯಾಖ್ಯಾನವನ್ನು ಬರೆದಿದ್ದಾರೆ.

ಅನೇಕ ಮಹಾನ್ ತಮಿಳು ವಿದ್ವಾಂಸರು ಸಹ ಪರಿಮೇಲಳಗರ ವ್ಯಾಖ್ಯಾನದ ಮೌಲ್ಯವನ್ನು ಪ್ರಶ್ನಿಸಲು ಹಿಂಜರಿಯುತ್ತಿದ್ದಾಗ ನಮ್ಮ ಕವಿವರ್ಯರು ತಮಿಳು ವಿದ್ವತ್ ಪ್ರಪಂಚದಲ್ಲಿ ಹೊಸ ಪ್ರಯೋಗವೊಂದನ್ನು ರೂಢಿಗೆ ತರುವ ಸಾಹಸವನ್ನು ಮಾಡಿದರು. ಮಾರ್ಟಿನ್ ಲೂಥರ್ ಅವರು ಪೋಪ್ ಮತ್ತು ಅವರ ಧರ್ಮಶಾಸ್ತ್ರಜ್ಞರು ಬೈಬಲನ್ನು ಅರ್ಥೈಸಿದ ರೀತಿಯನ್ನು ಪ್ರಶ್ನಿಸಿದಂತೆ ನಮ್ಮ ಕವಿವರ್ಯರು ಪರಿಮೇಲಳಗರ ಹಳೆಯ ವ್ಯಾಖ್ಯಾನದ ಔಚಿತ್ಯವನ್ನು ಪ್ರಶ್ನಿಸುತ್ತಾರೆ. ತಮಿಳು ಸಾಹಿತ್ಯದ ನವೋದಯ ಆಧುನಿಕ ಮನೋಭಾವಕ್ಕೆ ಅನುಸಾರವಾಗಿ ಅವರು ನಡೆದಿದ್ದಾರೆ.

ಅವರ ಹೊಸ ವ್ಯಾಖ್ಯಾನದ ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡಬಹುದು. ತಿರುಕ್ಕುರಳಿನ 'ಮಕ್ಕಳನ್ನು ಪಡೆಯುವಿಕೆ' ಎಂಬ ಅಧ್ಯಾಯದಲ್ಲಿ ಒಂದು ಪದ್ಯ ಹೀಗಿದೆ:

ಪೆರುಮ್ ವರ್ರುಳ್ ಯಾಮರಿವದು ಇಲ್ಲೈ ಅರಿವರಿನ್ದ
ಮಕ್ಕಟ್ಪೇರು ಅಲ್ಲ ಪಿರ.

(ಅರಿವನ್ನು ತಿಳಿದ ಮಕ್ಕಳನ್ನು ಪಡೆಯುವುದಕ್ಕಿಂತ ನಮಗೆ ಬೇರೆ ಭಾಗ್ಯವಿಲ್ಲ, ಉಳಿದ ಭಾಗ್ಯವನ್ನು ನಾವು ಲಕ್ಷಿಸುವುದಿಲ್ಲ.)

ಈ ಕುರಳನ್ನು ಅರ್ಥೈಸುವಲ್ಲಿ ಪರಿಮೇಲಳಗರ್ ಅವರು ಅರಿವನ್ನು ತಿಳಿದ ಮಕ್ಕಳೆಂದರೆ ಗಂಡುಮಕ್ಕಳನ್ನು ಮಾತ್ರ ಉದ್ದೇಶಿಸಿದ್ದಾರೆ. ಏಕೆಂದರೆ ಅವರ ಪ್ರಕಾರ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸವೂ ಇರುವುದಿಲ್ಲ, ಬುದ್ಧಿವಂತಿಕೆಯೂ ಇರುವುದಿಲ್ಲ, ಜೊತೆಗೆ ಅವರಿಗೆ ಪಿತೃಗಳ ಶ್ರಾದ್ಧ ಕರ್ಮಗಳನ್ನು ಮಾಡುವ ಅಧಿಕಾರವೂ ಇರುವುದಿಲ್ಲ. ಹೀಗೆ ಅವರು ಹೇಳುವುದಕ್ಕೆ ಕಾರಣ ಧರ್ಮಶಾಸ್ತ್ರದ ಪ್ರಕಾರ ಸ್ತ್ರೀಯರಿಗೆ ವಿದ್ಯಾಭ್ಯಾಸದ ಅಧಿಕಾರ ಹಾಗೂ ಶ್ರಾದ್ಧಕರ್ಮಗಳನ್ನು ಮಾಡುವ ಅಧಿಕಾರವಿಲ್ಲ. ನಮ್ಮ ಕವಿವರ್ಯರು ತಮ್ಮ ವ್ಯಾಖ್ಯಾನದಲ್ಲಿ ಇದನ್ನು ವಿವರಿಸುತ್ತಾ ಮಕ್ಕಳು ಎಂದು ಹೇಳುವಾಗ ವಳ್ಳುವರ್ ಅವರು ಗಂಡು ಹೆಣ್ಣು ಭೇದವೆಣಿಸಿಲ್ಲ. ಬೇರೊಂದೆಡೆ ಅವರು ಹೇಳುತ್ತಾ ಮಕ್ಕಳ ಮುದ್ದು ಮಾತು ವೀಣೆಯ (ಯಾಪ್) ನುಡಿಗಿಂತ ಇಂಪಾಗಿರುತ್ತದೆ ಎಂದು ಹೇಳುವಾಗ ಕೇವಲ ಗಂಡುಮಕ್ಕಳನ್ನೇ ಉದ್ದೇಶಿಸಿ ಹೇಳಿಲ್ಲ.

ಮತ್ತೊಂದು ಕುರಳಿನಲ್ಲಿ ಗಣಿತ ಮತ್ತು ಅಕ್ಷರಜ್ಞಾನ ಇವೆರಡು ಜೀವಂತ ಪ್ರಾಣಿಗಳಿಗೆ ಎರಡು ಕಣ್ಣುಗಳಂತೆ ಎಂದು ಹೇಳಲಾಗಿದೆ. ಜೀವಂತ ಪ್ರಾಣಿಗಳು ಎಂದು ಹೇಳುವಾಗ ಪರಿಮೇಲಳಗರ್ ಅವರು ಗಂಡಸರನ್ನು ಮಾತ್ರ ಕುರಿತು ಹೇಳಿದ್ದಾರೆ. ಆದರೆ ಇಲ್ಲಿ ಗಂಡು ಹೆಣ್ಣು ಇಬ್ಬರನ್ನು ಕುರಿತು ಹೇಳಿದ್ದಾರೆ ಎಂದು ನಮ್ಮ ಕವಿವರ್ಯರು ಅಭಿಪ್ರಾಯ ಪಡುತ್ತಾರೆ.

ಇನ್ನೊಂದು ಕುರಳ್ ಹೀಗೆ ಹೇಳುತ್ತದೆ :

ಅರನೆನಪ್ಪಟ್ಟದೇ ಇಲ್‌ವಾಳ್ಕೈ ಅಃದುಮ್
ಪಿರನ್ ಪಳಿಪ್ಪದು ಇಲ್ಲಾಯಿನ್ ನನ್ರು

(ಧರ್ಮವೆಂದೆನಿಸಿಕೊಳ್ಳುವುದೇ ಗೃಹಧರ್ಮ ; ಅದೂ ಪರರ ಅಪಕೀರ್ತಿ ನಿಂದೆಗಳಿಗೆ ಗುರಿಯಾಗದಿದ್ದರೆ ಮತ್ತಷ್ಟು ಶೋಭಿಸುತ್ತದೆ.)

ಪರಿಮೇಲಳಗರು 'ಪರರ' ಎಂದು ಹೇಳುವಲ್ಲಿ ಸನ್ಯಾಸಿಗಳು ಎಂದು ಅರ್ಥೈಸಿದ್ದಾರೆ. ಏಕೆಂದರೆ ಸನ್ಯಾಸಿಗಳ ಜೀವನ ಗೃಹಸ್ಥನ ಜೀವನಕ್ಕಿಂತ ಶ್ರೇಷ್ಠವಾದುದು. ಆದರೆ ನಮ್ಮ ಕವಿವರ್ಯರು ಇದೇ ವಳ್ಳುವರರ ಇತರ ಕುರಳನ್ನು ಉದಾಹರಿಸಿ ಗೃಹಸ್ಥ ಜೀವನವೇ ಸನ್ಯಾಸಿಯ ಜೀವನಕ್ಕಿಂತ ಮಿಗಿಲಾದುದೆಂದು ಸ್ಪಷ್ಟಪಡಿಸಿದ್ದಾರೆ.

ಅವರು ಉದಾಹರಿಸುವ ಕುರಳ್ :

> ಇಯಲ್ಬಿನಾನ್ ಇಲ್‌ವಾಳ್ಕ್ಯೆ ವಾಳ್‌ಬವನ್ ಎನ್ಬಾನ್
> ಮುಯಲ್ವಾರುಳ್ ಎಲ್ಲಾಮ್ ತಲೈ
> (ಎಲ್ಲರೂ ಮೆಚ್ಚುವ ಹಾಗೆ ಧರ್ಮಗುಣದಿಂದ ಕುಟುಂಬಜೀವನವನ್ನು ನಡೆಸುವವನು ಬಾಳಿನ ಶ್ರೇಯಸ್ಸಿಗಾಗಿ ತಪಸ್ಸು ಮೊದಲಾದ ಹಲವು ತರದ ಪ್ರಯತ್ನಗಳನ್ನು ನಡಸುವವರೊಳಗೆಲ್ಲಾ ಮಿಗಿಲಾದವನು.)

'ಪೊರುಟ್‌ಪಾಲ್' (ಅರ್ಥಭಾಗ) ಭಾಗದ ಬಹುಪಾಲಿನ ಎಲ್ಲಾ ಕುರಳ್‌ಗಳು ರಾಜರುಗಳಿಗೆ ಮಾತ್ರ ಅನ್ವಯಿಸುತ್ತದೆ ಎಂದು ಪರಿಮೇಲಳಗರು ಹೇಳಿದರೆ ಅವು ಎಲ್ಲಾ ರೀತಿಯ ಜನರಿಗೂ ಅನ್ವಯಿಸುತ್ತದೆ ಎಂದು ನಮ್ಮ ಕವಿವರ್ಯರು ಎತ್ತಿ ತೋರಿಸುತ್ತಾರೆ. ಸನ್ನಡತೆ, ಮಾತಿನ ಜಾಣ್ಮೆ, ಮದ್ಯಪಾನ ನಿಷೇಧ, ಜೂಜು, ವಿದ್ಯೆಯ ಅಗತ್ಯ ಮುಂತಾದವುಗಳನ್ನು ವಿವರಿಸುವ ಅಧ್ಯಾಯಗಳು ಎಲ್ಲಾ ಜನರಿಗೂ ಅನ್ವಯಿಸುತ್ತವೆ ಎಂಬುದನ್ನು ನಮ್ಮ ಕವಿವರ್ಯರು ಉದಾಹರಣೆಯೊಡನೆ ಎತ್ತಿ ತೋರಿಸುತ್ತಾರೆ. ಇಂತಹ ತಪ್ಪು ಪರಿಮೇಲಳಗರು ಮಾಡುವುದಕ್ಕೆ ಕಾರಣವೆಂದರೆ ಕುರಳ್ ಅರಸರಿಗೆ ಮಾತ್ರ ಬೇಕಾದ ಅರ್ಥಶಾಸ್ತ್ರದ ಅಡಿಗಲ್ಲಿನ ಮೇಲೆ ರಚನೆಯಾಗಿದೆ ಎಂಬ ತಪ್ಪು ಅಭಿಪ್ರಾಯ.

ಅದೇ ರೀತಿಯಲ್ಲಿ ಕಾಮವಿಭಾಗದಲ್ಲಿ ಪರಿಮೇಲಳಗರ್ ಅವರು ಅನಾವಶ್ಯಕ ವಾಗಿ ತಮಿಳು ಸಾಹಿತ್ಯದಲ್ಲಿ ರೂಢಿಯಲ್ಲಿರುವಂತೆ ಒಬ್ಬ ಸೇವಕಿಯನ್ನು ಮಧ್ಯೆ ಸೇರಿಸಿ ಕೆಲವು ಕುರಳಿನ ಮೂಲಾರ್ಥವನ್ನು ಅಪಾರ್ಥ ಮಾಡಿದ್ದಾರೆ. ತನ್ನ ಪ್ರಿಯನೊಡನೆ ಏಕಾಂತದಲ್ಲಿ ಕಳೆದ ಸವಿನೆನಪುಗಳನ್ನು ಹೆಂಗಸೊಬ್ಬಳು ಸ್ವಗತವಾಗಿ ಹೇಳುವಾಗಲೂ ಅವೆಲ್ಲವೂ ಸಖಿಯ ಎದುರಿನಲ್ಲಿಯೇ ಹೇಳುತ್ತಾಳೆ ಎಂದು ಪರಿಮೇಲಳಗರು ಹೇಳು ತ್ತಾರೆ. ಇದು ಸರಿಯೆನಿಸುವುದಿಲ್ಲ. ಅದೇ ರೀತಿಯಲ್ಲಿ ಪ್ರೇಮಿಯೊಬ್ಬನು ತನ್ನ ಬಯಕೆಯಂತೆ ಬೇಕಾದ ಹೆಣ್ಣು ಪಡೆಯಲು ನಿರಾಶನಾದಾಗ 'ಮಡಲೇರುಡಲ್' ಎಂಬ ಸತ್ಯಾಗ್ರಹವನ್ನು ಸಾರ್ವಜನಿಕ ಸ್ಥಳದಲ್ಲಿ ಮಾಡಿ ಆ ಮೂಲಕ ತನಗೆ ಇಷ್ಟವಾದ ಹೆಣ್ಣನ್ನು ಪಡೆಯಲು ತೀರ್ಮಾನಿಸುತ್ತಾನೆ. ಈ ಸಂದರ್ಭದಲ್ಲಿ ನಾಯಕನು ಸಖಿ ಯೊಡನೆ ತನ್ನ ಅಭೀಷ್ಟಗಳನ್ನು ತೋಡಿಕೊಂಡು ಹೇಳುವ ರೀತಿಯಲ್ಲಿಯೂ ಅಸಂಬದ್ಧತೆ ತುಂಬಿದೆ. ನಾಯಕಿಯು ತನ್ನ ಪ್ರಿಯನ ಸಖ್ಯದಲ್ಲಿ ಅಸಂತೋಷ ವ್ಯಕ್ತ ಪಡಿಸುತ್ತಾಳೆ. ಅದಕ್ಕೆ ಅವಳು ಕೊಡುವ ಕಾರಣ ತನ್ನ ಪ್ರಿಯನು ವೇಶ್ಯೆಯೊಬ್ಬಳ ಸಂಪರ್ಕ ಹೊಂದಿದ್ದಾನೆ ಎಂದು ಅವಳು ಹೇಳುವ ಮಾತು ಸಮರ್ಥನೀಯವಲ್ಲ. ಕಾರಣ ವಳ್ಳುವರ್ ಅವರು ವೇಶ್ಯಾವೃತ್ತಿಯನ್ನು ಖಂಡಿಸಲು ಒಂದು ಇಡೀ ಅಧ್ಯಾಯ ವನ್ನೇ ಮೀಸಲಿರಿಸಿದ್ದಾರೆ. ಕುಲೀನ ಗಂಡಸರು ಅವರತ್ತ ನುಸುಳುವುದಿಲ್ಲವೆಂದು ಅವರು ಹೇಳಿದ್ದಾರೆ. ಪರಿಮೇಲಳಗರ್ ಅವರ ವ್ಯಾಖ್ಯಾನದಲ್ಲಿ ಕಂಡುಬರುವ ಇಂತಹ ಅಸಂಬದ್ಧ ವಿಷಯಗಳನ್ನು ಕವಿವರ್ಯರು ಎತ್ತಿ ತೋರಿಸಿದ್ದಾರೆ.

ತಿರುಕ್ಕುರಳಿಗೆ ಅವರು ಬರೆದಿರುವ ವ್ಯಾಖ್ಯಾನವನ್ನು ಸಮರ್ಥಿಸಲು ಅವರು ಬೇರೆ ನಾಲ್ಕು ಕಿರಿಯ ಹೊತ್ತಗೆಗಳನ್ನು ಬರೆದಿದ್ದಾರೆ: 'ತಿರುವಳ್ಳುವರ್ ತಿಡುಕ್ಕಿಡುವಾರ್' (ತಿರುವಳ್ಳುವರು ಗಾಬರಿಪಡುತ್ತಾರೆ), 'ತಿರುವಳ್ಳುವರು ಪರಿಮೇಲಳಗರು', 'ತಿರುವಳ್ಳುವರ್ ಇನ್ಬಮ್' (ತಿರುವಳ್ಳುವರ್ ಹೇಳುವ ಸುಖಜೀವನ), 'ವಳ್ಳುವರ್ ಉಳ್ಳಮ್' (ವಳ್ಳುವರರ ಆಶಯ). ಅವೆಲ್ಲವೂ ಸಾಹಿತ್ಯ ವಿಮರ್ಶೆಯನ್ನು ಕುರಿತ ಒಳ್ಳೆಯ ಗ್ರಂಥಗಳು.

'ಇಲಕ್ಕಿಯ ಇನ್ಬಮ್' (ಸಾಹಿತ್ಯ ಸುಖ) ಎಂಬ ಮತ್ತೊಂದು ವಿಮರ್ಶಾತ್ಮಕ ಗ್ರಂಥವನ್ನು ಅವರು ಬರೆದಿದ್ದಾರೆ. ಕಂಬ ರಾಮಾಯಣದಲ್ಲಿ ಕವಿ ಕಂಬರು ಹೇಗೆ ಮೊದಲಿನಿಂದ ಕೊನೆಯವರೆಗೆ ಉಪಮೆಗಳನ್ನು ಕೊಡುವುದರಲ್ಲಿ ಒಂದೇ ತೆರನಾದ ಮನೋಭಾವನೆಯನ್ನು ಹೊಂದಿದ್ದಾರೆ ಎಂಬ ವಿಚಾರವನ್ನು ಈ ಗ್ರಂಥದಲ್ಲಿ ವ್ಯಕ್ತಪಡಿಸಿದ್ದಾರೆ. ದಶರಥ ರಾಮನನ್ನು ಕುರಿತು ಹೇಳುವಾಗ ಅವನು ತನ್ನ ಜೀವ ಆತ್ಮ ಎಲ್ಲವೂ ಆಗಿದ್ದಾನೆಂದು ಹೇಳುತ್ತಾನೆ. ವಿಶ್ವಾಮಿತ್ರನು ದಶರಥನ ಬಳಿಗೆ ಬಂದು ರಾಮನನ್ನು ಅಸುರರ ನಾಶಕ್ಕಾಗಿ ಕಳುಹಿಸುವಂತೆ ಕೇಳುವಾಗ ದಶರಥನಿಗೆ ಸಾಕ್ಷಾತ್ ಮೃತ್ಯುದೇವತೆ ಯಮನು ಬಂದು ತನ್ನ ಪ್ರಾಣವನ್ನು ಕೊಂಡೊಯ್ಯುತ್ತಿದ್ದಾನೆಂಬಂತೆ ವರ್ಣಿಸುತ್ತಾನೆ. ರಾಮಲಕ್ಷ್ಮಣರು ವಿಶ್ವಾಮಿತ್ರನೊಡನೆ ಹೊರಟು ನಿಂತಾಗ ದಶರಥನು ಆತ್ಮವನ್ನು ಕಳೆದುಕೊಂಡಂತೆ ನಿಸ್ತೇಜವಾದ ದೇಹದೊಡನೆ ಪ್ರಜ್ಞಾಶೂನ್ಯನಾಗುತ್ತಾನೆಂದು ವರ್ಣಿಸಲಾಗಿದೆ. ಅವನು ಮತ್ತೆ ಪ್ರಜ್ಞಾವಸ್ಥೆಗೆ ಬರುವುದು ರಾಮನು ಸೀತೆಯನ್ನು ಮದುವೆಯಾಗಲಿದ್ದಾನೆ ಎಂಬ ಸುದ್ದಿ ತಿಳಿದಾಗಲೆ. ಮಿಥಿಲೆಗೆ ಹೋಗಿ ರಾಮನನ್ನು ಕಂಡ ಕೂಡಲೆ ಕಳೆದುಹೋದ ಆತ್ಮವು ಮತ್ತೆ ಬಂದು ತನ್ನ ದೇಹದಲ್ಲಿ ಸೇರಿಕೊಂಡಂತೆ ವರ್ಣಿಸುತ್ತಾನೆ. ಪರಶುರಾಮನು ರಾಮನೊಡನೆ ಯುದ್ಧಕ್ಕೆ ಸನ್ನದ್ಧನಾದಾಗ ದಶರಥನು ರಾಮನನ್ನು ಕೊಲ್ಲಬೇಡವೆಂದೂ ಆ ಮೂಲಕ ತನ್ನ ಪ್ರಾಣವನ್ನು ರಕ್ಷಿಸುವಂತೆ ಬೇಡಿಕೊಳ್ಳುತ್ತಾನೆ. ಕೈಕೇಯಿಯು ರಾಮನನ್ನು ಅರಣ್ಯವಾಸಕ್ಕೆ ಕಳುಹಿಸುವಂತೆ ಕೇಳಿದಾಗ ದಶರಥನಿಗೆ ಅವಳು ತನ್ನ ಪ್ರಾಣವನ್ನೇ ಕೇಳುತ್ತಿದ್ದಾಳೆಂದು ನೋವಾಗುತ್ತದೆ. ಅವಳು ಅದನ್ನು ಈಡೇರಿಸುವಂತೆ ಒತ್ತಾಯ ಮಾಡಿದಾಗ ಪ್ರಾಣಪಕ್ಷಿ ಹಾರಿಹೋದಂತಾಗಿ ಪ್ರಜ್ಞೆಯಿಲ್ಲದೆ ನೆಲಕ್ಕೆ ಬೀಳುತ್ತಾನೆ. ಕೊನೆಗೆ ರಾಮನು ಅಯೋಧ್ಯೆಯನ್ನು ಬಿಟ್ಟು ಅರಣ್ಯಕ್ಕೆ ಹೊರಟುಹೋದಾಗ ದಶರಥನು ಸಾಯುತ್ತಾನೆ. ಕಾರಣ ಕಂಬರು ಹೇಳುವಂತೆ ದಶರಥನ ಪ್ರಾಣ ರಾಮನಲ್ಲಿತ್ತು. ಅವನು ಹೊರಟುಹೋದಾಗ ಪ್ರಾಣವೂ ಹೋಯಿತು. ಹೀಗೆ ಉಪಮೆಯ ಬಳಕೆಯಲ್ಲಿ ಕಾವ್ಯದ ಆದಿಯಿಂದ ಅಂತ್ಯದವರೆಗೆ ಒಂದೇ ರೀತಿಯ ಮನೋಭಾವನೆಯನ್ನು ನಾವು ಕಾಣಬಹುದು.

ಕಂಬರ ಸ್ವಯಂನಿಂದನಾ ಪದ್ಯವೆಂದು ಹೇಳಲಾದ ಪದ್ಯದಲ್ಲಿ, ರಾವಣನ

ವಧೆಯ ನಂತರ ರಾಮನಿಂದ ಕವಿಯು ಹೇಳಿಸುವ ಮಾತುಗಳು ಈ ರೀತಿ ಗಾಂಧೀತತ್ತ್ವಗಳಿಂದ ತುಂಬಿ ತುಳುಕಿವೆ.

ಜಯಶಾಲಿಯಾಗಿರುವ ಈ ಸಮಯದಲ್ಲಿ ನಾನು ನಿಜವಾಗಿಯೂ ಜಯಶಾಲಿಯಾಗಿಲ್ಲ, ಸೋತು ಬೆನ್ನು ತೋರಿಸುತ್ತಾ ಯುದ್ಧಭೂಮಿಯಲ್ಲಿ ನಿಂತಿದ್ದೇನೆ ಎಂದು ಭಾಸವಾಗುತ್ತದೆ. ಏಕೆಂದರೆ ರಾವಣನ ಕಾಲು ಕೈಗಳನ್ನು ಬಿಗಿದು ಹಮ್ಮನ್ನು ಅಡಗಿಸಿ ಆ ಮೂಲಕ ಅವನ ಮನಃಪರಿವರ್ತನೆಯನ್ನು ಮಾಡಿದ ಕಾರ್ತವೀರ್ಯಾರ್ಜುನನ ಹಾಗೆ ಇಲ್ಲವೆ ಶಿವನು ತನ್ನ ಹೆಬ್ಬೆರಳನ್ನು ಅದುಮಿ ಅವನನ್ನು ಕೈಲಾಸ ಪರ್ವತದ ಅಡಿಯಲ್ಲಿ ಸಿಕ್ಕಿಸಿ ಅವನ ಸೊಕ್ಕನ್ನು ಅಡಗಿಸಿದ ಹಾಗೆ ಮಾಡದೆ ಅವನನ್ನು ನಾನು ಕೊಂದೆನಲ್ಲಾ, ಉಪವಾಸವಾದರೂ ಮಾಡಿ ಅವನ ಮನಸ್ಸನ್ನು ನಾನೇ ಬದಲಾಯಿಸಬೇಕಾಗಿತ್ತು ಇಲ್ಲವೆ ಅಂತಹ ಪ್ರಯತ್ನದಲ್ಲಿ ಮರಣವನ್ನಾದರೂ ಅಪ್ಪಿದ್ದರೆ ದೇವತೆಗಳಿಂದ ಮೆಚ್ಚುಗೆ ಪಡೆಯುತ್ತಿದ್ದೆ. ಹಾಗಲ್ಲದೆ ಈಗ ಜೀವಂತವಾಗಿ ಉಂಡು ಜೀವಿಸುವುದನ್ನು ಪ್ರದರ್ಶನ ಮಾಡುತ್ತಾ ದೇವತೆಗಳಿಂದ ಅಪಹಾಸ್ಯಕ್ಕೆ ಈಡಾಗಿದ್ದೇನೆ.

ರಾವಣನ ಬಾಯಲ್ಲಿ ಬರುವ ಕಂಬರ ಈ ಮಾತುಗಳನ್ನು ನಮ್ಮ ಕವಿವರ್ಯರು ಗಾಂಧೀಜಿಯವರು ಬ್ರಿಟೀಷರ ಮನಃಪರಿವರ್ತನೆಗಾಗಿ ನಡೆಸಿದ ಉಪವಾಸ ಸತ್ಯಾಗ್ರಹದೊಡನೆ ಹೋಲಿಸಿದ್ದಾರೆ. ಆದರೆ ತಮಿಳು ವಿದ್ವಾಂಸರು ಕವಿವರ್ಯರ ಈ ಹೇಳಿಕೆಯನ್ನು ಒಪ್ಪುವುದಿಲ್ಲ.

'ಗಾಂಧಿಯಡಿಗಳುಂ ಕಂಬನಾಟ್ಟಾಳ್ವಾರುಂ' ಎಂಬ ಪುಸ್ತಕದಲ್ಲಿ ಕೊನೆಯವರೆಗೂ ನಮ್ಮ ಕವಿವರ್ಯರು ಇಂತಹುದೇ ಅಭಿಪ್ರಾಯವನ್ನು ಹೊರಗೆಡಹುತ್ತಾರೆ. 'ಕಂಬನುಂ ವಾಲ್ಮೀಕಿಯುಂ' ಎಂಬ ಮತ್ತೊಂದು ಗ್ರಂಥದಲ್ಲಿ ಇಬ್ಬರು ಕವಿಗಳ ಮಾರ್ಗಗಳ ಹೋಲಿಕೆ ವ್ಯತ್ಯಾಸಗಳನ್ನು ಚರ್ಚಿಸುತ್ತಾರೆ. ಅನೇಕ ಮಾನವೀಯ ಕೊರತೆಗಳನ್ನು ಒಳಗೊಂಡ ವಾಲ್ಮೀಕಿಯ ಪಾತ್ರಗಳು ಹೇಗೆ ಮಾನವರಾಗಿದ್ದಾರೆ ಎಂಬುದನ್ನು, ಕಂಬರು ಚಿತ್ರಿಸುವ ಪಾತ್ರಗಳು ಹೇಗೆ ಆದರ್ಶವೂ ದೈವಿಕವೂ ಆಗಿದ್ದಾರೆ ಎಂಬುದನ್ನೂ ಅವರು ತೋರಿಸುತ್ತಾರೆ. ಉದಾಹರಣೆಗೆ ಸೀತೆಯ ಚಿತ್ರಣವನ್ನು ನೀಡುವ ವಾಲ್ಮೀಕಿಯು ಆಕೆಯು ಒಬ್ಬ ಸಾಮಾನ್ಯ ಸ್ತ್ರೀಯೆಂದೂ ರಾವಣನು ಆಕೆಯನ್ನು ದೈಹಿಕವಾಗಿ ಮುಟ್ಟಿ ಲಂಕೆಗೆ ಎಳೆದುಕೊಂಡು ಹೋಗಬಹುದೆಂದು ಹೇಳಿದರೆ ಕಂಬರು ಆಕೆಯು ನಿಷ್ಠಾವಂತ ಪತಿವ್ರತೆಯೆಂದೂ ರಾವಣನು ಆಕೆಯನ್ನು ಮುಟ್ಟಲು ಸಾಧ್ಯವಿಲ್ಲವೆಂದು, ಆಕೆಯು ವಾಸವಾಗಿರುವ ಇಡೀ ಗುಡಿಸಲಿನ ಸಹಿತ ತೆಗೆದುಕೊಂಡು ಹೋಗಿರಬಹುದೆಂದು ವರ್ಣಿಸಿದ್ದಾರೆ. ವಾಲ್ಮೀಕಿ ರಾಮಾಯಣದ ಅಹಲ್ಯೆಯು ತನ್ನ ಗಂಡನು ಅವನಲ್ಲವೆಂದು ತಿಳಿದಿದ್ದರೂ ಇಂದ್ರನಿಗೆ ವಶಳಾಗುತ್ತಾಳೆ. ಕಂಬ ರಾಮಾಯಣದಲ್ಲಿ ಇಂದ್ರನೊಡನೆ ಸಮಾಲೋಚಿಸಿದ ನಂತರವೂ ಮೋಸದಿಂದ ಅವನು ತನ್ನ ಗಂಡನೆಂದೇ ನಂಬಿ ಅವನ ವಶಳಾಗುತ್ತಾಳೆ. ವಾಲ್ಮೀಕಿಯ ಪ್ರಕಾರ

ಸುಗ್ರೀವನ ಹೆಂಡತಿ ತನ್ನ ಪತಿ ಕಾಣೆಯಾದಾಗ ಮದ್ಯಪಾನಾಸಕ್ತಳಾಗುತ್ತಾಳೆ. ವಾಲಿ ಯೊಡನೆ ಉಪಪತ್ನಿಯಾಗಿ ಜೀವಿಸುತ್ತಾಳೆ. ಆದರೆ ಕಂಬರ ಪ್ರಕಾರ ಅವಳು ವಿಧವಾ ಜೀವನವನ್ನು ನಡೆಸುತ್ತಾಳೆ. ಮಂಡೋದರಿಯ ಪಾತ್ರವನ್ನು ಸಹ ಕಂಬರು ಹೆಚ್ಚು ಆದರ್ಶಮಯವಾಗಿ ಚಿತ್ರಿಸಿದ್ದಾರೆ. ಕಂಬರು ರಾಮಾಯಣದ ಕಥಾಪಾತ್ರಗಳನ್ನು ತಮಿಳು ಸಂಸ್ಕೃತಿಯ ಆದರ್ಶಕ್ಕನುಗುಣವಾಗಿ ರೂಪಿಸುವುದನ್ನು ನಾವು ಕಾಣಬಹುದು.

## ತಮಿಳು ಸಾಹಿತ್ಯದಲ್ಲಿ ಕವಿವರ್ಯರ ಸ್ಥಾನ :

ತಮಿಳು ಸಾಹಿತ್ಯ ಚರಿತ್ರೆಯಲ್ಲಿ ನಾಮಕ್ಕಲ್ ರಾಮಲಿಂಗಮ್ ಪಿಳ್ಳೆಯವರ ಕೃತಿಗಳಿಗೆ ವಿಶಿಷ್ಟ ಸ್ಥಾನವಿದೆ. ಆಧುನಿಕ ತಮಿಳು ಸಾಹಿತ್ಯ ಬೆಳವಣಿಯಲ್ಲಿ ಅವು ಮೈಲಿಗಲ್ಲುಗಳಾಗಿವೆ. ಭಾರತದ ಸ್ವಾತಂತ್ರ್ಯ ಚಳುವಳಿಯ ವಿವಿಧ ಘಟ್ಟಗಳನ್ನು ಅವು ಗುರುತಿಸುತ್ತವೆ. ಗಾಂಧೀಜಿ, ತಿಲಕ್, ರಾಜಾಜಿ ಮುಂತಾದ ಅನೇಕ ನಾಯಕರ ಪಾತ್ರವನ್ನು, ಜನರ ಮನೋವೃತ್ತಿಯನ್ನು ಅವು ಚಿತ್ರಿಸುತ್ತವೆ. ಜನರಲ್ಲಿ ಗಾಂಧೀತತ್ವ ಗಳನ್ನು ಅವು ಹರಡುತ್ತವೆ. ಅವರು ಗೀತೆಗಳು ಹಾಗೂ ಭಾಷಣಗಳ ಮೂಲಕ ಗಾಂಧೀವಾದವನ್ನೂ ದೇಶಭಕ್ತಿಯನ್ನೂ ಜನರಿಗೆ ಮುಟ್ಟಿಸಿದರು. ಅವರ ಕೃತಿಗಳು ಗಾಂಧೀತತ್ವದ ಸಾರವನ್ನು ಪಡೆದಿವೆ.

ಅವರ ಬರೆಹಗಳಲ್ಲಿ ವೈಯಕ್ತಿಕ ಹಾಗೂ ಸಾಮಾಜಿಕ ನೈತಿಕತೆಯು ಅಮೂಲ್ಯ ನಿಯಮಗಳಿವೆ. ಹಿಂದಿನ ಕವಿಗಳಂತೆ ಅವರು ಧರ್ಮಸಿದ್ಧಾಂತಗಳನ್ನು ಮತಧರ್ಮಗಳ ಮೂಲಕ ಅವರು ಬೋಧಿಸಲಿಲ್ಲ; ರಾಜಕೀಯದ ಮಾಧ್ಯಮದಿಂದ ಬೋಧಿಸಿದರು. ನವ ಸಾಮಾಜಿಕ ಹಾಗೂ ಆರ್ಥಿಕ ಕ್ರಮವನ್ನು ಅನುಸರಿಸಲು ಅನುಕೂಲಕರವಾಗು ವಂತೆ ಮಾನವೀಯ ಯಾತನೆಗಳನ್ನು, ಸಾಮಾಜಿಕ ಐಕ್ಯತೆ, ಆರ್ಥಿಕ ಸಮಾನತೆ ಮುಂತಾ ದವುಗಳ ಬಗೆಗೆ ಅವರು ಹಾಡಿದ್ದಾರೆ. ಹಿಂದಿನ ಧಾರ್ಮಿಕ ಕವಿಗಳಂತಲ್ಲದೆ ಅವರು ಮಾನವತಾವಾದಿ ಕವಿಯಾಗಿದ್ದಾರೆ.

ಜನಸಾಮಾನ್ಯರೂ ಸುಲಭವಾಗಿ ಕಂಠಪಾಠ ಮಾಡಲು ಅನುಕೂಲವಾಗುವ ರೀತಿಯಲ್ಲಿ, ಅವರು ಪದ್ಯಗಳನ್ನೂ ಹಾಡುಗಳನ್ನೂ ತಮ್ಮದೇ ಆದ ಸುಲಭ ಶೈಲಿಯಲ್ಲಿ ಬರೆದಿದ್ದಾರೆ. ಈ ವಿಚಾರದಲ್ಲಿ ರಾಮಲಿಂಗಸ್ವಾಮಿ ಹಾಗೂ ಭಾರತೀಯಾರರನ್ನು ಬಿಟ್ಟು ಉಳಿದ ಎಲ್ಲಾ ತಮಿಳುನಾಡು ಕವಿಗಳಿಂದ ಅವರು ಭಿನ್ನರಾಗುತ್ತಾರೆ.

'ಕುಮ್ಮಿ', 'ಕೋಲಾಟ', 'ಕಣ್ಣಿ', 'ನೊಂಡಿ ಚಿಂದು' ಮುಂತಾದ ಸಾಹಿತ್ಯದಲ್ಲಿ ಬಹಳಕಾಲ ಮರೆಯಾಗಿದ್ದ ಪ್ರಾಸಪ್ರಧಾನ ಜಾನಪದ ಗೀತೆಗಳ ಮಟ್ಟಿನಲ್ಲಿ ಅವರು ಹಾಡುಗಳನ್ನು ರಚಿಸಿ ತಮಿಳು ಸಾಹಿತ್ಯವನ್ನು ಸಂಪದ್ಭರಿತವನ್ನಾಗಿ ಮಾಡಿದರು. ಅವರು ರಚಿಸಿರುವ ಕಾದಂಬರಿಗಳು, ನಾಟಕಗಳು ಕೆಲವೇ ಆದರೂ ಅವರು ಆಧುನಿಕ ತಮಿಳು ಕಾದಂಬರಿಗಳ ಕರ್ತೃಗಳಲ್ಲಿ ಮುಂದಾಳು ಎನಿಸಿದ್ದಾರೆ.

ರಾಷ್ಟ್ರೀಯ ವಾದಿಗಳ ಹಾಗೂ ಪ್ರಾದೇಶಿಕ ವಾದಿಗಳ ಮೂಲಭೂತ ಉದ್ದೇಶಗಳಲ್ಲಿರುವ ನಿಜವಾದ ಸತ್ವವನ್ನು ತಿಳಿಸುವ ಅವರ ಕೃತಿಗಳು ಅವು ಪರಸ್ಪರ ಒಂದು ಬೇರೆಯಲ್ಲ ಎಂಬ ವಿಚಾರವನ್ನು ಸ್ಪಷ್ಟಪಡಿಸುತ್ತವೆ. ಪ್ರಾದೇಶಿಕ ಹಾಗೂ ರಾಷ್ಟ್ರೀಯ ಲಕ್ಷಣಗಳ ಮಧುರ ಬಾಂಧವ್ಯವನ್ನು ಅವರ ಗದ್ಯ ಮತ್ತು ಪದ್ಯ ರಚನೆಗಳಲ್ಲಿ ನಾವು ಕಾಣಬಹುದು. ಪ್ರಾದೇಶಿಕ ಸಂಕುಚಿತತೆಯನ್ನು ಭಾಷಾಂಧತೆಯನ್ನು ಹೇಗೆ ದಾಟಬೇಕೆಂದು ತಮಿಳು ಲೇಖಕರಿಗೆ ಅವರು ಕಲಿಸಿದ್ದಾರೆ. ತಮಿಳು ರಾಷ್ಟ್ರೀಯತೆಯನ್ನು ಅವರು ಕೊಂಡಾಡಿದ್ದಾರೆ, ಆದರೆ ಅದೇ ಸಮಯದಲ್ಲಿ ಪ್ರತ್ಯೇಕತೆಯನ್ನೂ ಭಾಷಾಂಧತೆಯನ್ನೂ ಖಂಡಿಸಿದ್ದಾರೆ.

ತಮಿಳು ಭಾಷೆಯಲ್ಲಿ ಸಂಗೀತವು ಅಸಾಧ್ಯವೆಂದು ತಿಳಿದಿದ್ದ ಕಾಲದಲ್ಲಿ ತಮ್ಮ ಗದ್ಯ ಪದ್ಯಗಳ ಮೂಲಕ ಅದು ಸಾಧ್ಯವೆಂದು ತೋರಿಸಿರುವುದು ಮಾತ್ರವಲ್ಲದೆ ತಮಿಳು ಭಾಷೆಯ ಹಾಗೂ ಜನರ ಬೆಳವಣಿಗೆಗೆ ಅದು ಅತ್ಯಾವಶ್ಯಕವೆಂದು ಅವರು ಸಾರಿದ್ದಾರೆ.

ಬ್ರಾಹ್ಮಣರ ಬಗೆಗೆ ತೀವ್ರವಾದ ವಿರೋಧ ತಮಿಳುನಾಡಿನ ರಾಜಕೀಯದಲ್ಲಿ ದ್ವೇಷ ತುಂಬಿ ತುಳುಕಾಡುತ್ತಿದ್ದ ಸಮಯದಲ್ಲಿ ಅವರು ಧೈರ್ಯದಿಂದ ಬಹಿರಂಗವಾಗಿ ಮುಂದೆ ಬಂದು ತಮ್ಮ ಲೇಖನಗಳ ಹಾಗೂ ಭಾಷಣಗಳ ಮೂಲಕ ಅಂತಹ ಪೂರ್ವಾಗ್ರಹಗಳನ್ನು ಖಂಡಿಸಿದ್ದಾರೆ. ಇಂತಹ ದ್ವೇಷವನ್ನು ವಿಧಾನ ಪರಿಷತ್ತಿನಲ್ಲಿ ಕವಿಯರು ಖಂಡಿಸಿ ಮಾತನಾಡಿದಾಗ ಕಲ್ಕಿ ಕೃಷ್ಣಮೂರ್ತಿಯವರು ಅವರನ್ನು ಆಧುನಿಕ ನಕ್ಕೀರರೆಂದು (ಮೂರನೆಯ ಕಣ್ಣನ್ನು ತೆರೆದಾಗ ಸಾಕ್ಷಾತ್ ಶಿವನನ್ನೇ ಆಕ್ಷೇಪಿಸಿದ ಒಬ್ಬ ತಮಿಳು ಕವಿ) ಕವಿಯರನ್ನು ಕೊಂಡಾಡಿದರು.

ಹೀಗೆ ನಾಮಕ್ಕಲ್ ಕವಿಯರು ತಮಿಳು ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಸಾಕಷ್ಟು ಪ್ರಮಾಣದ ಕೊಡುಗೆಯನ್ನು ನೀಡಿದ್ದಾರೆ ಎಂದು ನಾವು ಹೇಳಬಹುದು. ಗಾತ್ರದಲ್ಲಿ ಅವರ ಕೊಡುಗೆ ಹೆಚ್ಚು ಎಂದು ಹೇಳಲಾಗದಿದ್ದರೂ ಗುಣದಲ್ಲಿ ಅವರು ನೀಡಿರುವ ಕೃತಿಗಳು ಗಣನೀಯ. ಉಪಯೋಗದ ದೃಷ್ಟಿಯಿಂದ ಹೇಳುವುದಾದರೆ ಅವರ ಕೃತಿಗಳು ನಿಜವಾಗಿಯೂ ಅಮೂಲ್ಯವಾದವುಗಳಾಗಿವೆ. ಅವರು ಬಹುಪಾಲು ಬರೆದದ್ದು ಸೆರೆಮನೆಯಲ್ಲಿರುವಾಗ, ರಾಷ್ಟ್ರೀಯ ಆಂದೋಳನದಲ್ಲಿ ತಲ್ಲೀನರಾಗಿರುವಾಗ. ಇಲ್ಲವೆ ಬಡತನದ ಬೇಗೆಯಲ್ಲಿ ತಲ್ಲಣಿಸುತ್ತಿರುವ ಪರಿಸ್ಥಿತಿಯಲ್ಲಿ ಎಂದು ತಿಳಿದಾಗ ನಾವು ನಿಜವಾಗಿಯೂ ಅವರ ಕೃತಿಗಳನ್ನು ಮೆಚ್ಚಲೇಬೇಕು. ಬಹುಶಃ ಬರೆಯಲು ಅನುಕೂಲಕರವಾದ ಉತ್ತಮ ವಾತಾವರಣ ಅವರಿಗೆ ದೊರೆತಿದ್ದರೆ ಅವರಿಂದ ನಾವು ಇನ್ನಷ್ಟು ಹೆಚ್ಚಿನ ಪ್ರಮಾಣದಲ್ಲಿ ಕಾವ್ಯಗಳನ್ನು, ಗದ್ಯಕೃತಿಗಳನ್ನು ನಿರೀಕ್ಷಿಸಬಹುದಾಗಿತ್ತು. ಅವರು ರಾಜಕೀಯಕ್ಕೆ ಧುಮುಕಿದ ಪರಿಣಾಮವಾಗಿ ತಮಿಳು ರಚನಾತ್ಮಕ ಸಾಹಿತ್ಯಕ್ಕೆ ಸಾಕಷ್ಟು ನಷ್ಟವಾಗಿದೆ ಎಂದು ಹೇಳಬೇಕು. ಕೃತಿಗಳನ್ನು ರಚಿಸುವಾಗ ಅವರಿಗಿದ್ದ

ಪ್ರತಿಕೂಲಗಳು, ಪರಿಸ್ಥಿತಿ ಮುಂತಾದವುಗಳನ್ನು ಪರಿಗಣಿಸುವಾಗ ಅವರು ಉತ್ತಮ ಕವಿ, ಕಾದಂಬರಿಕಾರ, ಅನುವಾದಕರು, ಪ್ರಬಂಧಕಾರರು, ವಿಮರ್ಶಕರು, ಗೀತರಚನಕಾರರು ಮುಂತಾಗಿ ಹಲವು ರೀತಿಗಳಲ್ಲಿ ನೀಡಿರುವ ಕೊಡುಗೆಯನ್ನು ನಿಜವಾಗಿಯೂ ಮೆಚ್ಚಬೇಕಾಗಿದೆ. ಆಧುನಿಕ ತಮಿಳು ಸಾಹಿತ್ಯ ಚರಿತ್ರೆಯಲ್ಲಿ ಅವರ ಸ್ಥಾನ ಅಪೂರ್ವ.

## ಸೂರಿಯನ್ ವರುವದು ಯಾರಾಲೇ

ಸೂರಿಯನ್ ವರುವದು ಯಾರಾಲೇ ?
ಚಂದಿರನ್ ತಿರಿವದುಮ್ ಎವರಾಲೇ ?
ಕಾರಿರುಳ್ ವಾನಿಲ್ ಮಿನ್‌ಮಿನಿ ಪೋಲ್
ಕಣ್ಣೀರ ಪಡುವನ್ ಅವೈ ಎನ್ನ ? ॥ 1 ॥

ಪೇರಿಡಿ ಮಿನ್ನಲ್ ಎದನಾಲೇ
ಪೆರುಮಳೈ ಪೆಯ್‌ವದುಮ್ ಎವರಾಲೇ ?
ಯಾರಿದರ್ಕೆಲ್ಲಾಮ್ ಅದಿಕಾರಿ ?
ಅದೈನಾಮ್ ಎಣ್ಣಿಡ ವೇಂಡಾಮೋ ?

ತಣ್ಣೀರ್ ವಿೞುಂದದುಮ್ ವಿತ್ತೈಯಿನ್ಱಿ
ತರೈಯಿಲ್ ಮುಳೈತ್ತಿಡುಮ್ ಪುಲ್ ಏದು ?
ಮಣ್ಣಿಲ್ ಪೋಟ್ಟಿಡು ವಿದೈಯೊನ್ಱು
ಮರಂಚೆಡಿ ಯಾವದು ಯಾರಾಲೇ ?
ಕಣ್ಣಿಲ್ ತೆರಿಯಾ ಶಿಶುವೈ ಎಲ್ಲಾಮ್
ಕರುವಿಲ್ ವಳರ್ಪ್ಪದು ಯಾರ್ ವೇಲೈ ?
ಎಣ್ಣಿಪ್ಪಾರ್ತ್ತಾಲ್ ಇದರ್ಕೆಲ್ಲಾಮ್
ಏದೋ ಒರುವಿತ್ತೈ ಇರುಕ್ಕುಮನ್ಱೋ ? ॥ 2 ॥

ಎತ್ತನೈ ಮಿರುಕಮ್ ? ಎತ್ತನೈ ಮೀನ್ !
ಎತ್ತನೈ ಊರ್ವನ ಪಱಪ್ಪನ ಪಾರ್ !
ಎತ್ತನೈ ಪೂಚ್ಚಿಗಳ್ ಪುೞು ವಗೈಗಳ್ !
ಎಣ್ಣತ್ತೊಲೈಯಾಚ್ಚೆಡಿಕೊಡಿಗಳ್ !
ಎತ್ತನೈ ನಿಱಂಗಳ್ ಉರುವಂಗಳ್ !
ಎಲ್ಲಾ ವಱ್ಱೈಯುಮ್ ಎಣ್ಣುಂಗಾಲ್
ಅತ್ತನೈಯುಮ್ ತರ ಒರು ಕರ್ತನ್
ಯಾರೋ ಎಂಗೋ ಇರುಪ್ಪದು ಮೆಯ್ ॥ 3 ॥

ಅಲ್ಲಾವೆನ್‌ಬಾರ್ ಚಿಲಪೇರ್‌ಗಳ್ ;
ಅರನ್‌ಅರಿ ಎನ್‌ಬಾರ್ ಚಿಲಪೇರ್‌ಗಳ್ ;
ವಲ್ಲಾನ್ ಅವನಪರ ಮಂಡಲತ್ತಿಲ್
ವಾೞುಮ್ ತಂದೈ ಎನ್‌ಬಾರ್‌ಗಳ್
ಚೊಲ್ಲಾಲ್ ವಿಳಂಗಾ 'ನಿರ್ವಾಣಮ್'

## ಸೂರ್ಯನು ಬರುವುದು ಯಾರಿಂದ ?

ಸೂರ್ಯನು ಬರುವುದು ಯಾರಿಂದ ?
ಚಂದ್ರನು ಅಲೆವುದು ಯಾರಿಂದ ?
ತಾರೆಗಳ ಬಾನಲಿ ಥಳ ಥಳ
ಕಣ್ಣಿಗೆ ಕಾಣುವುದು ಏನು ಅವು ?
ಸಿಡಿಲು ಮಿಂಚು ಅದು ಯಾರಿಂದ ?
ಭೋರ್ಗರೆ ಮಳೆ ಅದು ಯಾರಿಂದ ?
ಯಾರಿದಕೆಲ್ಲಾ ಅಧಿಕಾರಿ
ಯೋಚಿಸಬೇಡವೆ ನಾವೆಲ್ಲ ? ॥ 1 ॥

ಮಳೆಯಾನಂತರ ಭೂಮಿಯಲಿ
ಮೊಳೆವುದು ಹುಲ್ಲದು ಎಂತಲ್ಲಿ ?
ಮಣ್ಣಲಿ ಹಾಕಿದ ಬೀಜವದು
ಮರವಾಗಿ ಬೆಳೆವುದು ಯಾರಿಂದ ?
ಕಣ್ಣಿಗೆ ಕಾಣದೆ ಗರ್ಭದಲಿ
ಕಾವನು ಬೆಳೆವುದು ಎಂತಲ್ಲಿ ?
ಅವುದೀ ಶಕ್ತಿ ಎಲ್ಲಿಯದದು ?
ಏನಿದು ಶಕ್ತಿ ಯಾರದದು ? ॥ 2 ॥

ಪ್ರಾಣಿಗಳೆನಿತು ಮೀನಂಗಳೆನಿತು
ಎಣಿಸಲಾಗದ ಜೀವಿಗಳೆನಿತು
ಎಣಿಕೆಗೆ ನಿಲುಕದ ಕೀಟಗಳೆನಿತು
ವರ್ಣವರ್ಣದ ಹುಳುಗಳು ಎನಿತು
ಎಣಿಕೆಗೆ ಬಾರದ ಗಿಡಮರಬಳ್ಳಿ
ನಾನಾ ವರ್ಣ ನಾನಾ ರೂಪ
ಇವುಗಳನೆಲ್ಲಾ ತಂದವನೊಬ್ಬ
ಯಾರೋ ಎಲ್ಲೋ ಇರುವುದು ಸತ್ಯ ॥ 3 ॥

ಅಲ್ಲಾ ಎಂಬರು ಹಲವು ಜನ
ಹರಿಹರ ನೆಂಬರು ಕೆಲವು ಜನ
ಬಲ್ಲವನವನಿಹ ನಾಕದಲಿ
ತಂದೆಯು ಅವನೇ ಲೋಕದಲಿ
ಎಲ್ಲವು ನಿರ್ಮಾಣ ಎಂಬುವರು

ಎನ್ರುಮ್ ಚಿಲಪೇರ್ ಚೊಲ್‌ವಾರ್‌ಗಳ್ ;
ಎಲ್ಲಾಮ್ ಇಪ್ಪಡಿ ಪಲಪೇಚುಮ್
ಏದೋ ಒರುಂಪೊರುಳ್ ಇರುಕ್ಕಿರದೇ ! || 4 ||

ಅಂದಪ್ಪೊರುಳೈ ನಾಮ್ ನಿನೈತ್ತೇ
ಅನ್ನವರುಮ್ ಅನ್‌ಬಾಯ್ ಕ್ಕುಲವಿಡುವೋಮ್
ಎಂದಪ್ಪಡಿಯಾಯ್ ಎವರ್ ಅದನೈ
ಎಪ್ಪಡಿತ್ತೊಳುಂದಾಲ್ ನಮಕ್ಕೆನ್ನ ?
ನಿಂದೈ ಪಿರರೈ ಪೇಚಾಮಲ್
ನಿನೈವಿಲುಂ ಕೆಡುಂತಲ್ ಚೆಯ್ಯಾಮಲ್
ವಂದಿಪ್ಪೋಮ್ ಅದೈ ವಣಂಗಿಡುವೋಮ್
ವಾಳ್‌ವೋಮ್ ಸಂಕಟಮಾಮ್ ವಾಳ್‌ನ್ದಿಡುವೋಮ್ || 5 ||

— o —

ಎಚ್ಚರಿಕ್ಕೈ

ಗಾಂದಿ ಗಾಂದಿ ಗಾಂದಿಯೆನ್ರು
ಕಾದಡೈಕ್ಕ ಕೂವಿನೋಮ್
ಗಾಂದಿ ಚೊನ್ನ ಶಾಂತಿ ಮಟ್ಟುಮ್
ಕಾದಿಲ್ ಏರವಿಲ್ಲೆಯೇ ! || 1 ||

ಸತ್ತಿಯಂತ್ತೈ ವಾಳ್‌ನ್ದು ಕಾಟ್ಟುಮ್
ಶಾಂತಮೂರ್ತಿ ಗಾಂದಿಯೈ
ನಿತ್ತಮ್ ನಿತ್ತಮ್ ವಾಳ್‌ತ್ತಿವಿಟ್ಟು
ನೆಂಜಿಲ್ ಉಣ್ಮೈ ಪೆರ್ರಲೋಮ್ || 2 ||

ಕೋಪಮನ್ರು ಗಾಂದಿಯಾರೈ
ತಲೈವರಾಗ ಕೊಂಡ ನಾಮ್
ತಾಪಮನ್ರು ವಾರ್ತೈ ಪೇಚ
ತಣ್ಮೈ ಕೂಡ ಪೆರ್ರಲೋಮ್ || 3 ||

ಪದವಿಯನ್ರು ಸೇವೆ ಚೆಯ್ಯ
ಪಾಡಮ್ ಚೊಲ್ಲಿತ್ತಂದನಾಮ್
ಪದವಿ ಪರ್ರಿ ಉದವಿಯನ್ರು
ಪಲವುಮ್ ಪೇಶಿತ್ತಿರಿಕಿರೋಮ್ || 4 ||

ಬಣ್ಣಿಸಲಾಗದು ಎಂಬುವರು
ಎಲ್ಲರ ಮಾತು ಇಂತಾಗಿ
ಏನೋ ಹುರುಳಿದೆ ಇದಕೊಂದು ॥ 4 ॥

ಆ ಹುರುಳನು ನೆನೆಯುತ ನಾವು
ಅನುನಯದಿಂದಲಿ ಬಾಳೋಣ
ಯಾರದನೆಂತೇ ಪೂಜಿಸಲಿ
ಆಗುವುದಾದರು ನಮಗೇನು ?
ಪರರನು ನಿಂದಿಸಿ ನುಡಿಯದೆ
ಮನದಲಿ ಕೆಡುಕನು ನೆನೆಯದೆ
ಬಾಗುವ ನಾವು ವಂದಿಸುವ
ಬಾಳುವ ಸುಖದಲಿ ಬಾಳಿಸುವ ॥ 5 ॥

—o—

## ಎಚ್ಚರಿಕೆ

ಗಾಂಧಿ ಗಾಂಧಿ ಗಾಂಧಿ ಎಂದು
ಕಿವಿಗಡಚಿಸಿ ಕೂಗಿದೆ
ಗಾಂಧಿ ನುಡಿದ ಶಾಂತಿ ಮಂತ್ರ
ಕಿವಿಯುವರೆಗೆ ಏರದೆ ? ॥ 1 ॥

ಶಾಂತಮೂರ್ತಿ ಸತ್ಯನಿರತ
ಎಂಥ ಧನ್ಯ ನಮ್ಮ ಗಾಂಧಿ
ಎಂತೆಲ್ಲಾ ಹೊಗಳುವೆವು
ಅಂತರಾತ್ಮದ ನಿಜವೆ ಎಲ್ಲವು ? ॥ 2 ॥

ಕೋಪರಹಿತ ಗಾಂಧಿಯನ್ನು
ನಾಥನಾಗಿ ಪಡೆದ ನಾವು
ತಾಪರಹಿತ ಮಾತನಾಡ
ಬಾರದೆ ತಡವುವೆವು ಏತಕೆ ? ॥ 3 ॥

ಪದವಿ ರಹಿತ ಸೇವಾಭಾವ
ಪಾಠ ಕಲಿಸಿ ನಾವು
ಅಧಿಕಾರ ಪಡೆದು ನಾವು
ವ್ಯರ್ಥ ಕಾಲ ಕಳೆವೆವು ॥ 4 ॥

ಪೂಜೈಯೋಡು ಕೋಯಿಲುಕ್ಕಳ್
ಪೂಟ್ಟಿವೈಕ್ಕುಮ್ ಸಾಮಿಪೋಲ್
ಓಸೈಯೋಡು ಗಾಂದಿಬೊಮ್ಮೈ
ಊರ್ವಲಂಗಳ್ ಚೆಯ್‌ಗಿರೋಮ್ ॥ 5 ॥

ಪಗೈಪರುಕ್ಕುಮ್ ನನ್ಮೈ ಚೆಯ್ಮ್
ಪ್ಪರಿವು ಕರ್ರುಕೊಂಡ ನಾಮ್
ಇಂಗವುಮ್ ನಲ್ಲ ನನ್ಬರೋಡುಮ್
ಪಗೈಮೈಕೊಳ್ಳ ಮಿಂಜಿನೋಮ್ ॥ 6 ॥

ಅಣುಮ್ಮೈಯುಮ್ ಪಿಳಂದಳಿಕ್ಕುಮ್
ಆಯುದಂಗಳ್ ವಂದಪಿನ್
ಮಣ್ಣುಮಣ್ಣುತ್ತುಕ್ಕಣವಿರ್ ಕೂಡ
ಮೂರ್ಕ್ಕ ಪೇಚ್ಚು ಚೆಲ್ಲುಮೋ ? ॥ 7 ॥

ಇಂದನಾಟ್ಟಿನ್ ಜ್ಞಾನಮಾರ್ಗಮ್
ಎನ್ರು ಒನ್ರೈ ವಿಟ್ಟುನಾಮ್
ಎಂದ ಗುಂಡ್ಕೈಕೊಂಡು ಮರ್ರ
ಎವರ್ಕ್ಕೆ ಪೆಲ್ಲ ಪೋಗಿರೋಮ್ ? ॥ 8 ॥

—o—

## ಕತ್ತಿಯಿನ್ರಿ ರತ್ತಮಿನ್ರಿ !

ಕತ್ತಿಯಿನ್ರಿ ರತ್ತಮಿನ್ರಿ
ಯುದ್ದಮೊನ್ರು ವರುಗುದು
ಸತ್ತಿಯತ್ತಿನ್ ನಿತ್ತಿಯತ್ತೈ
ನಂಬುಮ್ ಯಾರುಮ್ ಚೇರುವೀರ್ ! ॥ ಕತ್ತಿ ॥

ಒಂಡಿ ಅಂಡಿ ಗುಂಡು ವಿಟ್ಟುಂ
ಗುಯಿರ್ ಪರಿತ್ತ ಲಿನ್ರಿಯೇ
ಮಂಡಲತ್ತಿಲ್ ಕಂಡಿಲಾದ
ಚಂಡೈಯೊನ್ರು ಪುದುಮೈಯೇ ! ॥ ಕತ್ತಿ ॥

ಪೂಜೆಗೊಂಡು ದೇಗುಲದಿ
ಬಂಧಿಯಾದ ದೇವನಂತೆ
ಕೂಗುಹಾಕಿ ಗಾಂಧಿ ಪ್ರತಿಮೆ
ಮೆರವಣಿಗೆ ಮಾಡುವೆವು ॥ 5 ॥

ಹಗೆಗಳಿಗೂ ಒಳಿತಂಗೈಯ್ವ
ಬಗೆಯ ಕಲಿತ ನಾವು
ಹಗೆಗಳಾಗಿಸುತಿಹೆವು ನಿಜದಿ
ಅಗದಿ ನಿತ್ಯ ಗೆಳೆಯರನು ॥ 6 ॥

ಅಣು ಅಣುವನು ಅಳಿಸುವ
ಅಣ್ವಸ್ತ್ರಗಳು ಬಂದರೂ
ರಣರಂಗ ಹಿಂಸೆ ಕಾರಿತ
ನುಡಿಗಳದು ವ್ಯರ್ಥವಲ್ಲವೆ ? ॥ 7 ॥

ಇರುವುದೊಂದು ಸನ್ಮಾರ್ಗ
ಅದುವೆ ಜ್ಞಾನ ಮಾರ್ಗ
ಅದನು ತೊರೆದ ನಾವಿನ್ನು
ಯಾವ ಗುಂಡಿನಿಂದ ಗೆಲ್ವುದಾರನು ? ॥ 8 ॥

— o —

## ಕತ್ತಿಯಿಲ್ಲ ರಕ್ತವಿಲ್ಲ

ಕತ್ತಿಯಿಲ್ಲ ರಕ್ತವಿಲ್ಲ
ಯುದ್ಧವೊಂದು ಬರುತಿದೆ
ಸತ್ಯವಂತ ನಿತ್ಯನಿರತ
ರೆಲ್ಲ ಬಂದು ಸೇರಿರಿ ॥ ಕತ್ತಿ ॥

ಮದ್ದುಗುಂಡು ಕೋವಿ ಕಠಾರಿ
ಸಾವು ನೋವು ಇಲ್ಲ
ಯುದ್ಧವೊಂದು ಲೋಕಕಿದುವೆ
ಹೊಚ್ಚಹೊಸದು ಎಲ್ಲ ॥ ಕತ್ತಿ ॥

ಕುದಿರೈಯಿಲ್ಲೈ ಯಾನೈಯಿಲ್ಲೈ
ಕೊಲ್ಲುಮ್ ಆಸೈಯಿಲ್ಲೈಯೇ
ಎದಿರಿಯೆನ್‌ರು ಯಾರುಮಿಲ್ಲೈ
ಎರ್‌ರುಮ್ ಆಸೈಯಿಲ್ಲದಾಯ್ ‖ ಕತ್ತಿ ‖

ಕೋಪಮಿಲ್ಲೈ ತಾಪಮಿಲ್ಲೈ
ಶಾಪಂಕೂರಲ್ ಇಲ್ಲೈಯೇ
ಪಾಪಮಾನ ಚೆಯ್‌ಗೈ ಯೊನ್‌ರುಮ್
ಪಣ್ಣುಮಾಸೈ ಯಿನ್‌ರಿಯೇ ‖ ಕತ್ತಿ ‖

ಕಂಡದಿಲ್ಲೈ ಕೇಟ್ಟದಿಲ್ಲೈ
ಚಂಡೈ ಯಿಂದ ಮಾದಿರಿ
ಪಂಡು ಚೆಯ್‌ದ ಪುಣ್ಣಿಯಂದಾನ್
ಪಲಿತ್ತಾದೇ ನಾಮ್ ಪಾರ್‌ತ್ತಿಡ !

ಗಾಂದಿಯೆನ್‌ರ ಶಾಂತ ಮೂರ್ತ್ತಿ
ನೇರ್‌ನ್ದು ಕಾಟ್ಟುಮ್ ಚೆನ್ನೆರಿ
ಮಾಂದರುಕ್ಕುಳ್ ತೀಮೈಕುನ್‌ರ
ವಾಯ್‌ನ್ದದೆಯ್ವ ಮಾರ್ಗಮೇ ‖ ಕತ್ತಿ ‖

—o—

## ತಮಿಳನ್ ಇದಯಮ್

ತಮಿಳನ್ ಎನ್‌ರೋರ್ ಇನಮುಂಡು ;
ತನಿಯೇ ಅವರ್‌ಕ್ಕೊರು ಗುಣಮುಂಡು ;
ಅಮಿಳ್‌ತಮ್ ಅವನುಡೈ ಮೊಳಿಯಾಗುಮ್
ಅನ್‌ಬೇ ಅವನುಡೈ ವಳಿಯಾಗುಮ್ ‖ 1 ‖

ಕಲೈಗಳ್ ಯಾವಿನುಮ್ ವಲ್ಲವನಾಮ್
ಕರ್‌ರವರ್ ಎವರ್‌ಕ್ಕುಮ್ ನಲ್ಲವನಾಮ್
ನಿಲೈಕೊಳ್ ಪರ್‌ಪಲ ಅಡೈಯಾಳಮ್
ನಿನ್‌ರನ ಇನ್ನುಮ್ ಉಡೈಯೋನಾಮ್ ‖ 2 ‖

ಆನೆಯಿಲ್ಲ ಕುದುರೆಯಿಲ್ಲ
ಕೊಲ್ಲಲೊಂದು ಆಸೆಯಿಲ್ಲ
ಹಗೆಗಳಾರು ನಮಗೆ ಇಲ್ಲ
ಕದನದಾಸೆ ನಮಗೆ ಇಲ್ಲ ॥ ಕತ್ತಿ ॥

ಕೋಪವಿಲ್ಲ ತಾಪವಿಲ್ಲ
ನಿಂದೆ ಬಯ್ಗಳೊಂದು ಇಲ್ಲ
ಪಾಪ ಕೆಲಸ ಇಲ್ಲಿ ಇಲ್ಲ
ಮಾಡುವಾಸೆ ಇನಿತು ಇಲ್ಲ ॥ ಕತ್ತಿ ॥

ಕಂಡದ್ದಿಲ್ಲ ಕೇಳಿದ್ದಿಲ್ಲ
ಇಂತಹ ಕದನವ
ಮೊದಲು ಗೈಯ್ದ ಪುಣ್ಯಫಲವು
ಇಂದು ಫಲಿಸಿತೊ ॥ ಕತ್ತಿ ॥

ಗಾಂಧಿಯೆಂಬ ಶಾಂತಮೂರ್ತಿ
ಆಯ್ದು ತಂದ ಈ ಮಾರ್ಗ
ಮಾನವನ ಹೀನ ಗುಣಗಳ
ಳಿಸುವ ಈ ಸನ್ಮಾರ್ಗ ॥ ಕತ್ತಿ ॥

—o—

## ತಮಿಳನ ಹೃದಯ

ತಮಿಳನ್ ಎನ್ನುವ ಕುಲವುಂಟು
ಅವನದು ಗುಣವು ಬೇರೊಂದು
ಅವನದು ನುಡಿಯು ಅಮೃತವು
ಒಲವಿನ ನಡೆಯೆ ಅವನ ಗುರಿ ॥ 1 ॥

ಕಲೆಗಳೆಲ್ಲವು ಕರಗತವು
ಕಲಿತವರೆಲ್ಲರು ಹಿತರವಗೆ
ಕಾಲಾತೀತದ ಪಾರಂಪರ್ಯ
ಹೆಮ್ಮೆಯ ವಿಷಯವು ಅವನಿಗದು ॥ 2 ॥

ಉಳವುಮ್ ತೊಳಿಲುಮ್ ಇಸೈ ಪಾಡುಮ್ ;
ಉಣ್ಮೈ ; ಚರಿತ್ತಿರಮ್ ಅಶೈಪೋಡುಮ್ ;
ಇಳವಿಲ್ ಅಳಂದಿಡುಮ್ ಪೆಣ್ಕೂಡ
ಇಸೈಯೋಡಳವದು ಕಣ್ಕೂಡು ॥ 3 ॥

ಯಾಳುಮ್ ಕುಳಲುಮ್ ನಾದಸುರಮ್
ಯಾವುಳ ತಣ್ಣುಮೈ ಬೇದಮೆಲ್ಲಾಮ್
ವಾಳುಮ್ ಕರುವಿಗಳ್ ವಗೈ ಪಲವುಮ್
ವಗುತ್ತದು ತಮಿಳನಿಲ್ ವಿಂಗೈಯುಲಾಮ್ ॥ 4 ॥

ಮಾನಮ್ ಪೆರಿದೆನ ಉಯಿರ್ ವಿಡುವಾನ್ ;
ಮರ್ರವರ್ಕ್ಕಾಗತ್ತುಯರ್ ಪಡುವಾನ್ ;
ದಾನಮ್ ವಾಂಗಿಡ ಕೂಟಿಡುವಾನ್ ;
'ತರುವದು ಮೇಲ್' ಎನಪ್ಪೇಚಿಡುವಾನ್ ॥ 5

ಜಾದಿಗಳ್ ತೊಳಿಲಾಲ್ ಉಂಟೆನಿನುಮ್
ಸಮರಸಮ್ ನಾಟ್ಟಿನಿಲ್ ಕಂಡವನಾಮ್;
ನೀತಿಯುಮ್ ಉರಿಮೈಯುಮ್ ಅನ್ನಿಯರ್ಕ್ಕುಮ್
ನಿರೈಕುರೈಯಾಮಲ್ ಚೆಯ್ದವನಾಮ್ ॥ 6 ॥

— o —

## ಪುದಿಯ ಸಮುದಾಯಮ್

ಪಾಟ್ಟಾಳಿ ಮಕ್ಕಳದು ಪಸಿತೀರ ವೇಂಡುಮ್ ;
ಪಣಮೆನ್ರ ಮೋಹತ್ತಿನ್ ವಿಶೈತೀರ ವೇಂಡುಮ್ ;
ಕೂಟ್ಟಾಳಿ ವರ್ಗಂಗಳ್ ಗುಣಮ್ಮಾರ ವೇಂಡುಮ್ ;
ಕುರ್ರೇವಲ್ ತೊಳಿಲ್ ಎನ್ರ ಮನಮ್ಮಾರ ವೇಂಡುಮ್ ;
ವೀಟ್ಟೋಡು ತಾನ್ಪುಟ್ಟುಮ್ ಸುಕಮಾಗ ಉಂಡುಮ್
ವೇರುಳ್ಳೋರ್ ತುನ್ಬಂಗಳ್ ಕಣ್ಣಾರ ಕಂಡುಮ್
ನಾಟ್ಟೋಡು ಚೇರಾದ ತನಿಬೋಗ ಉರಿಮೈ
ನಡವಾದಿಂಗಿನಿಯೆನ್ರು ನಾಮುರಿದಲ್ ಪೆರುಮೈ ॥ 1 ॥

ದುಡಿತದಲವನು ಹಾಡುವನು
ಉಳುಮೆಯಲಿ ನಲಿದಾಡುವನು
ಇತಿಹಾಸವೆ ಇದಕಾಧಾರ
ಹೆಣ್ಣಿನ ಗೋಳಿನ ದನಿಯಲಿ
ಕೇಳುವುದೊಂದು ಸಮರಸವು ॥ 3 ॥

ಯಾಳವು ಕೊಳಲು ನಾದಸ್ವರ
ಉಳಿದಿವೆ ಎನಿತೋ ಹಲವು ವಿಧ
ಇವ ತಂದ ತಮಿಳನೆಂದರೆ
ಅತಿಶಯವಿಲ್ಲವೀ ನುಡಿಯಲಿ ॥ 4 ॥

ಮಾನವು ಹಿರಿದು ಪ್ರಾಣಕೆ ಸಮವು
ಪರೋಪಕಾರವು ಪರಮಗುರಿ
ದಾನವ ಪಡೆವಲಿ ಹಿಂತೆಗೆವವಗೆ
ಕೊಡುವುದು ಮಾತ್ರವೆ ಪ್ರಧಾನವು ॥ 5 ॥

ಜಾತಿಗಾಧಾರ ಕಸಬುಗಳು
ಆದರು ಕಂಡನು ಸಮರಸವ
ನ್ಯಾಯ ನಿಷ್ಠೆಯಲಿ ಸಮರೆಲ್ಲ
ಹಗೆಗಳಿದಕೆ ಹೊರತಲ್ಲ ॥ 6 ॥

—o—

## ಹೊಸ ಸಮುದಾಯ

ಕೂಲಿಗಾರರ ಹಸಿವು ಹಿಂಗಬೇಕು
ಹಣವೆಂಬ ಮುಗಿಲಾಸೆ ತೀರಬೇಕು
ಧನಿಕ ವರ್ಗದ ದುರ್ಗುಣವು ಬದಲಾಗಬೇಕು
ದುಡಿಮೆ ಗುಲಾಮತನವೆಂಬ ಭಾವನೆ ತೊಲಗಬೇಕು
ಯಾರಿಗಿಲ್ಲದ ಸುಖವ ಮನಸೇಚ್ಛೆ ತಾನುಂಡು
ಅನ್ಯರ ಕಡುಕಷ್ಟ ಕಣ್ಣಾರೆ ಕಂಡು
ಒಂದಿನಿತು ಹಂಚಿಕೊಳ್ಳದ ಕಾಲವು ಇನ್ನಿಲ್ಲ
ಈ ಸತ್ಯವನು ನಾವಿಂದು ಅರಿಯಬೇಕು ॥ 1 ॥

ಉಡಲತ್ತಿಲ್ ವಡಿವತ್ತಿಲ್ ಬೇದಂಗಳ್ ಉಂಟುಂ;
ಉಳ್ಳತ್ತಿಲ್ ಎಣ್ಣತ್ತಿಲ್ ವಿತಿಯಾಸಮ್ ಉಂಟುಂ ;
ಜಡಲತ್ತೈ ಆಳ್‌ಕಿನ್‌ರ ಪಸಿದಾಹಮ್ ಎಲ್ಲಾಮ್
ಸಕಲರ್ಕ್ಕುಮ್ ಉಲಕತ್ತಿಲ್ ಸಮಮಾನದನ್‌ರೋ !
ಕಡಲೊತ್ತ ತೊೞಿಲಾಳರ್ ವೆರುಂಪಾಡು ಪಟ್ಟುಮ್
ಕಂಜಿಕ್ಕು ವೞಿಯಿನ್‌ರಿ ಕಣ್ಣೀರೈ ಕೊಟ್ಟುಮ್
ಮೂಡಮಿಂಕ್ಕ ನಿಲೈಮೈಕ್ಕು ಮಾರ್‍ರಿಲ್ಲೈ ಯಾನಾಲ್
ಮನಿದರ್ಕ್ಕಿಂಗರಿವುಳ್ಳ ಏರ್‍ರಂಗಳ್ ಏನೋ ? || 2 ||

ಪಸೈಮಿಕ್ಕ ತೊೞಿಲ್ ಚೆಯ್ದು ಪಲನ್‌ಮುರ್‍ರುಮ್ ಯಾರೋ
ಪರಿವರ್‍ರ ಮಂದಲಾೞಿ ಪರಿಕೊಂಡುಂ ಪೋಗ
ಪಸಿಮಿಕ್ಕು ಮಿಗನೊಂದ ತೊೞಿಲಾಳರ್ ಎಲ್ಲಾಮ್
ಪಗೈಯೊನ್‌ರುಂ ನಮ್ಮೈ ಎಣ್ಣಪ್ಪೞಿಕ್ಕೊಳ್ಳು ಮನ್ನಾಲ್
ವಸೈಮಿಂಕ್ಕ ನಿಲೈಮಾರ ವೞಿಯೊನ್‌ರುಂ ಚೂೞ್ವೋಮ್
ವರುಂಪೈಕ್ಕೇ ಇಡಮರ್‍ರ ಸಮುದಾಯಂ ವಾೞ್ವೈ
ಇಸೈಮಿಂಕ್ಕ ಮುರೈಕಂಡುಂ ಏರ್ಪಾಡುಂ ಚೆಯ್‌ವೋಮ್
ಎಲ್ಲಾರುಮ್ ಕುರೈವರ್‍ರ ನಲಮೆಯ್‌ದಿ ಉಯ್‌ವೋಮ್ || 3 ||

—o—

## ಪೆಣ್ಮೈ

ಅನ್‌ಬುಮ್ ಅರ್‌ವಮುಮ್ ಅಡಕ್ಕಮುಮ್ ಚೇರ್‌ನ್ದುಮ್
ಊಣ್‌ಮೈತ್ತನ್ಮೈಯುಮ್ ಉರುದಿಯುಮ್ ಮಿಂಗುನ್ದುಮ್
ತನ್ನಲ ಮರುಪ್ಪುಮ್ ಸಹಿಪ್ಪುತ್ತನ್ಮೈಯುಮ್
ಇಯಲ್‌ಬಾಯ್ ಅಮೈನ್ದುಮ್ ಇನ್‌ಬ ಸೊರೂಪಮಾಯ್
ತಾಯಾಯ್ ನಿನ್‌ರುಂ ದರಣಿಯೈ ತಾಂಗುಮ್ ;

ತಾರಮಾಯ್ ವನ್ದು ತಳರ್‌ವೈ ಪೋಕ್ಕುಮ್ ;
ಉಡನ್ ಪಿರಪ್ಪಾಗಿ ಉರುಂತುಣೈ ಪುರಿಯುಮ್ ;
ಮಂಗಳಾಯ್‌ಪ್ಪಿರನ್ದು ಸೇವೆಯಿಲ್ ಮಕಿೞುಮ್ ;
ಅಯಲಾರ್ ತಮಕ್ಕುಮ್ ಅನ್‌ಬೇ ಚೆಯ್ಯುಮ್ ;

ನಾಣಮ್ ಕೆಡಾಮಲ್ ನಟ್‌ಪು ಕೊಂಡಾಡುಮ್ ;
ಸಿನೇಗಂ ಇನ್‌ರಿಯುಮ್ ಚಿರಿತ್ತುಪ್ಪೇಸುಮ್

ಒಡಲ ವಿನ್ಯಾಸದಲಿ ಹಲವು ಬೇಧಗಳುಂಟು
ಮನದಾಳದೆಣಿಕೆಗಳು ಬೇರೆಯುಂಟು
ಹಸಿವು ದಾಹಗಳವು ಸಕಲರಿಗೂ ಸಮವಲ್ಲವೆ ?
ಸಾಗರದೋಪಾದಿಯಲಿ ಕಾರ್ಮಿಕರ ಕಡೇಕಷ್ಟ ಕಣ್ಣೀರ ಕಂಡು
ಗಂಜಿಯೂ ಕಾಣಿಸದ ಬದಲಿಸದ ನಮ್ಮ ಸಾಧನೆ
ಅದು ನಿಜದಿ ಒಂದು ಘನ ಕಾರ್ಯವೆ ? ॥ 2 ॥

ಹಸಿದ ಕೂಲಿಗಾರರು ನಮ್ಮನು ಹಗೆಗಳೆಂದು
ಬಗೆದು ಸೇಡು ತೀರಿಸುವ ಮುನ್ನ
ದಯಾಹೀನ ಒಡೆಯರು ಚತುರೋಪಾಯದಿ
ದುಡಿಮೆಯ ಫಲವನ್ನೆಲ್ಲ ಅಪಹರಿಸಿ ಓಡಿಹೋಗುವ ಮುನ್ನ
ಈ ಶಾಪಗ್ರಸ್ತರ ಮುಕ್ತಿಗೆ ನಾವೊಂದು ಮಾರ್ಗ ಹುಡುಕೋಣ
ಸಾಮಾಜಿಕ ಜೀವನದ ಈ ಒಂದು ವ್ಯವಸ್ಥೆಯಲಿ
ಬಡತನಕ್ಕೆ ಒಂದಿಷ್ಟು ತಾಣವನು ಇರಿಸೋಣ
ಎಲ್ಲರೂ ಬಾಳೋಣ, ಏಳಿಗೆ ಪಡೆಯೋಣ ॥ 3 ॥

— ೦ —

## ಹೆಣ್ತನ

ಒಲವು ಪರಹಿತ ವಿನಯ ತಾಳ್ಮೆ ಎಲ್ಲವು
ಕಲೆತು ಸತ್ಯಸಂಧತೆ ದೃಢನಿಶ್ಚಯ ನಿಸ್ವಾರ್ಥದಿ ಕೂಡಿ
ಈ ಎಲ್ಲಾ ಪರಮ ಸ್ವಭಾವ ಲಕ್ಷಣಗಳು ಮೂರ್ತಿವೆತ್ತಂತೆ
ಅನುಪಮ ಸ್ವರೂಪಳಾಗಿ ಭೂಮಿ ತಾಯಿಯಂತೆ
ಆಸರೆಯಾಗಿ ನಿಂತಿದ್ದಾಳೆ ಹೆಣ್ಣು
ಮಡದಿಯಾಗಿ ದಣಿವಾರಿಸುತ, ಸಹೋದರಿಯಾಗಿ ಸಹಾಯಗೈದು
ಮಗಳಾಗಿ ಜನಿಸಿ ಸೇವೆಗೈಯುತ
ಅಪರಿಚಿತರೊಡನೆ ಸ್ನೇಹವು ಬೆಳೆಸಿ
ಉಪಚರಿಸಿ ಸಂಕೋಚವನುಳಿಸಿ ರಕ್ಷಿಸುತ
ಸ್ನೇಹವಿಲ್ಲದೆಯೂ ಮುಗುಳ್ನಕ್ಕು ನುಡಿದು

ಕಾಮಮೆಲ್ಲಾಮೆಲುಮ್ ಕೊಂಜಿಕ್ಕಳಿಕ್ಕುಮ್ ;
ಪೆರುಮೈ ಮಿಗುನ್ದದು ಪೆಣ್ಣಿಯಾಲ್ ಪಾಗುಮ್

ಅಂದ ಪ್ಪೆರುಮೈ ಅರಿಯಾ ಆಡವರ್
ಅನ್ಬುಪ್ಪೇಚ್ಚೈ ಆಸೈಯೇನ್ರಯಿರ್ತ್ತು
ಚರಿತ್ತು ವಿಟ್ಟದಿಲ್ ಚಿಱ್ಱಿನ್ಬಮ್ ಎಣ್ಣಿ
ಕಳಿಪ್ಪೈ ಕಾಮಮಾಯ್ಕ್ಕರ್ಪನೈ ಚೆಯ್ದೇ
ಅವಮದಿಪ್ಪಡೈವದುಮ್ ಅಡಿಕ್ಕಡಿ ಉಣ್ಡು

ಇಪ್ಪಡಿ ಪಲಪೇರ್ ಅವಮಾನಮ್ ಪೋವದಾಲ್
ಪೆಣ್ಮನಮ್ ಎನ್ಬದೈ ಪಿಳ್ಳೈಪಸಪ್ಪೇಸಿ
"ಪುದಿರ್" ಎನ್ರು ಸೊಲ್ಲುದು ಪುರಿಯಾತ್ತನಮೇ ;
"ವಂಚನೈ" ಎನ್ಬಾರ್ ವಂಚಕಮುಂಡೈಯೋರ್.

— o —

## ಇಳಮೈ

ಕರ್ಪನೈ ಮಿಗುನ್ದದುಮ್ ಇಳೈಞರ್ ಮನಮ್
ಕವಿತ್ತೈಕ್ಕುಕಂದದುಮ್ ಇಳೈಞರ್ ಮನಮ್
ಅರ್ಬುದ ಉಣರ್ಚಿಗಳ್ ಅಲೈಪ್ಪುರಳುಮ್
ಆನಂದಮ್ ವಾಲಿಬ ನಿಲೈತರುಮೋ

ತುಳ್ಳಿ ಮಕಿಳ್ವದುಮ್ ಇಳಮ್ ಪರುವಮ್
ತುಂಡಿ ತುಂಡಿಪ್ಪುಡೈಯದುಮ್ ಇಳಮ್ ಪರುವಮ್
ಅಳ್ಳಿ ತರುವದುಮ್ ಅದನ್ ಪೆರುಮೈ
ಆರ್ವಮುಯ್ ಆರ್ವಲುಮ್ ಅದನ್ ಉರಿಮೈ

ಇನ್ಬಮ್ ಕುಳಿಪ್ಪದುಮ್ ಇಳಮ್ ಪರುವಮ್
ಈಗೈಯಿರ ಕಳಿಪ್ಪದುಮ್ ಇಳಮ್ ಪರುವಮ್
ತೇನ್ಬಮ್ ನೇರಿನುಮ್ ಮಲೈಕ್ಕಾದು
ದುಕ್ಕಮ್ ಅದನಿಡೈ ನಿಲೈಕ್ಕಾದು

ವಳರ್ಚಿಯೈ ದರಪ್ಪದು ವಾಲಿಬಮಾಮ್
ವಲ್ಲಮೈ ಮಿಪ್ಪದುಮ್ ವಾಲಿಬಮಾಮ್
ತೆಳರ್ಚಿಯೈ ಮರಪ್ಪದುಮ್ ವಾಲಿಬಮೇ
ದೈರಿಯಮ್ ಸಿರಪ್ಪದುಮ್ ವಾಲಿಬಮೇ

ಮೋಹವಿಲ್ಲದೆಯು ಸುಪ್ತಾವಸ್ಥೆಯಲಿ ಮೋಹಿತಳಾಗಿ
ಗೌರವಾರ್ಹವದು ಹೆಣ್ಣಿನ ಬಾಳು

ಇಂತಹ ಅತಿಶಯವರಿಯದೆ ಗಂಡಸು
ಒಲವಿನಾ ಮಾತುಗಳು ಮೋಹದ ಮಾತುಗಳೆಂದು
ಮುಗುಳ್ನಗೆಯನು ಮೋಹವೆಂದೆಣಿಸಿ
ಆನಂದೋತ್ಸಾಹವನು ಕಾಮುಕತೆಯೆಂದು ಬಗೆದು
ಅವಮಾನಿತರಾಗುವರು, ನಿರಾಶರಾಗುವರು
ಇದನರಿಯದೆ ಹಲವು ಜನ ಹೆಣ್ಣನು ಹಳಿವರು
ಇದು ಒಗಟೆಂದು ಹೇಳುವುದು ಅಜ್ಞಾನವಲ್ಲವೆ ?
ವಂಚನೆಯೆಂದರೆ ಅವರೇ ವಂಚಕರಾಗುವರು.

— o —

## ಹರೆಯದ ಮನ

ಅತಿ ಚಂಚಲವದು ಹರೆಯದ ಮನ
ಕಾವ್ಯಕೆ ಒಗ್ಗುವ ಮನವದು ಯೌವನ
ತಾರುಣ್ಯದ ಭಾವವು ಕಲಕುವ ಮನ
ಆನಂದದಿ ಮುದಗೊಳಿಸುವ ಚೇತನ

ಹರುಷವ ತರುವುದು ಯೌವನ
ಕೆಚ್ಚೆದೆ ಕೊಡುವುದು ಯೌವನ
ಹೆಮ್ಮೆಯು ಅದಕಿದೆ ಧಾರಾಳತನ
ಕ್ರಮವಿದೆ ಅದಕೆ ಹುರುಪು ಜಾಣತನ

ಉತ್ಸಾಹದಿ ಮೀಯುವುದು ಯೌವನ
ಉಬ್ಬುಬ್ಬಿ ಕೊಡುವುದು ಯೌವನ
ತೊಂದರೆ ಬಾರದು ಅದರ ಬಳಿ
ದುಃಖವು ಸುಸುಳದು ಅದರ ಬಳಿ

ಬೆಳೆಯುವ ಶಕ್ತಿಯಿಂದೆ ಯೌವನಕೆ
ಬಲವನು ಗಳಿಸುವ ಯೌವನಕೆ
ಶಕ್ತಿಹೀನತೆ ಮರೆಸುವುದು ಯೌವನವು
ನಿಜ ಅರ್ಥದಿ ಅದು ಸಾಮರ್ಥ್ಯವು

ಕಃಚತ್ರನಂಗಳೈ ಅರಿಯಾದಂ ;
ಕಾಸಂ ಪಣಂತರ ಮಂರೈಯಾದಂ ;
ತಂಚಂ ಉದವಿಡ ತಾವಿವರಂಮ್ ;
ತರಂಣಮ್ ವಾಯ್‌ತ್ರಿಡಿಲ್ ಆವಿತರಂಮ್

ಪುದಂಮೈಯೈ ಏರಂಂಬಂದಲ್ ಆದನ್ ಉಡೈಮೈ
ಪುರಟ್‌ಚಿಗಳ್ ಅರಂಂಬಂದಲ್ ಅದನಿಡೈಯೇ
ಮಂಂದಂಮೈಯಿನ್ ಪೆರಂಮೈಯೈ ಎಳ್ಳಾದಂ
ಮೂಡ ಪಳಕ್ಕಮಂಮ್ ಕೊಳ್ಳಾದಂ

ಮಾಣವ ಇಳೈಞರಿನ್ ಸಿಳನ್ತನಮ್
ಮಾಸಂಕಳ್ ಪಡಿಯಾಕ್ಕೊಳಂದೈ ಮಂನಮ್
ಆಣವಮ್ ಪುಗಂನ್ದದೈ ಕೆಡುಕ್ಕಾಮಲ್
ಆಂಡವನ್ ಅರಂಳೈ ವೇಂಡಿಡಂವೋಮ್

—೦—

ಜಿಪುಣತೆ ಅರಿಯದ ಯೌವನವು
ಧನಕನಕ ದಾನಕೆ ಹಿಂದೆಗೆಯದು
ಆಸರೆ ನೀಡಲು ಹಾತೊರೆಯುವ ಅದು
ಸಮಯದಿ ಸಿದ್ಧವು ಪ್ರಾಣತ್ಯಾಗಕೆ

ಹೊಸತನ ಬಯಸುತ ಬಂದೇಳುವುದು
ಹಳತೇನಿದ್ದರು ಗೋಜಿಗೆ ಹೋಗದೆ,
ಗೇಲಿಯು ಮಾಡದೆ, ಎಲ್ಲವು ನಂಬದೆ
ಮುನ್ನುಗ್ಗುವುದೇ ಅದರ ಪರಿ

ಎಳೆಗೂಸಿನ ನಿರ್ಮಲ ಹೃದಯ
ಈ ಯುವ ವಿದ್ಯಾರ್ಥಿಯ ಬಲ್ಮೆ
ಭಗವಂತನ ದಯೆ ಇರಲಿ ಸದಾ
ಉದ್ಧಟತನ ಅಡ್ಡಿ ಬಾರದಿರಲಿ
ಕಳಂಕರಹಿತ ಮನವನು ಕಲಕದಿರಲಿ

— o —



# ಕವಿಯನ್ನು ಕುರಿತು ಕೆಲವು ಅಭಿಪ್ರಾಯಗಳು

ತಿಲಕರು ಬಿತ್ತಿದ ಬೀಜವು ಭಾರತಿಯಾರರಾಗಿ ಮೊಳೆಯಿತು : ಗಾಂಧೀಜಿಯು ಹರಡಿದ ಬೀಜವು ನಾಮಕ್ಕಲ್ ಕವಿಗಳಾಗಿ ಬೆಳೆಯಿತು.

— ರಾಜಾಜಿ

"ಭಲೇ ಪಾಂಡಿಯಾ! ಪಿಳ್ಳೈ ನೀನು ನಿಜವಾಗಿಯೂ ಒಬ್ಬ ಕವಿ, ಅನುಮಾನ ವಿಲ್ಲ!"

— ಮಹಾಕವಿ ಭಾರತಿಯಾರ್

ನಾಮಕ್ಕಲ್ ಕವಿಯ ಹೆಸರು ತಮಿಳುನಾಡಿನ ಮೂಲೆಮೂಲೆಗೂ ಹಬ್ಬಿದೆ. ಪಂಡಿತ ಪಾಮರರೆಲ್ಲರೂ ಅವರನ್ನು ಹೊಗಳುತ್ತಾರೆ. ಅವರ ಹೆಸರಿನ ಯಾವುದೇ ಪುಸ್ತಕವು ಎಲ್ಲರಿಗೂ ಬೇಕು. ಉದಾಹರಣೆಗೆ ಆನಂದವಿಕಟನ್ ಪತ್ರಿಕೆಯಲ್ಲಿ ನಾಮಕ್ಕಲ್ ಕವಿಯ 'ನೊಂಡಿ ಚಿಂದು' ಎಂಬ ಹಾಡುಗಳು ಪ್ರಕಟವಾಗುತ್ತಿರುವುದರಿಂದ ಅದರ ಪ್ರತಿಗಳು ಮೊದಲಿಗಿಂತಲೂ ಐದು ಸಾವಿರ ಪ್ರತಿಗಳು ಹೆಚ್ಚಾಗಿ ಮುದ್ರಣವಾಗುತ್ತಿದೆ.

— ವಿ. ಕಲ್ಯಾಣಸುಂದರ ಮುದಲಿಯಾರ್

ತಮಿಳರ ಹೃದಯವನ್ನು ಸೆರೆಹಿಡಿದಿರುವವರಲ್ಲಿ ನನ್ನ ಸ್ನೇಹಿತ ರಾಮಲಿಂಗ ಪಿಳ್ಳೈ ಒಬ್ಬರು. ತಮಿಳರು ಸೇರುವ ಸಭೆ ಅದು ಎಂತಹ ಬಗೆಯದಾದರೂ ಸರಿ, ಅವರ ಹಾಡುಗಳನ್ನು ಕೇಳಿದ ಕೂಡಲೆ ಜನ ಆವೇಶಭರಿತರಾಗುತ್ತಾರೆ, ಹರ್ಷಚಿತ್ತ ರಾಗುತ್ತಾರೆ. ಇದು ನಾನು ಕಣ್ಣಾರೆ ಕಂಡದ್ದು.

— ಟಿ.ಕೆ. ಚಿದಂಬರನಾಥ ಮುದಲಿಯಾರ್

ಗಾಂಧಿತತ್ತ್ವಗಳಿಗೆ ನಾಮಕ್ಕಲ್ ಕವಿಯು ಒಂದು ಕವಿವಾಣಿ. ಗಾಂಧಿವಾದವನ್ನು ಅದರ ಸವಿಯನ್ನು ಹೊರಗೆಡಹುವ ಒಂದು ಶಂಖು ಅವರು. ದೇಶಪ್ರೇಮವು ಭಾರತಿಯಾರರ ಕವಿತೆಗಳಲ್ಲಿ ಪ್ರವಾಹವಾಗಿ ಹರಿದರೆ, ಗಾಂಧಿತತ್ತ್ವಗಳು ನಾಮಕ್ಕಲ್ ಕವಿವರ್ಯರ ಪದ್ಯಗಳಲ್ಲಿ ಪ್ರತ್ಯೇಕ ಸಂಗೀತದ ರೂಪವನ್ನು ಪಡೆದಿವೆ.

— ಪಿ. ಶೂರನ್

ನನ್ನ ಸ್ನೇಹಿತರಾಗಿದ್ದ ರಾಮಲಿಂಗಮ್ ಒಬ್ಬ ಪರಮ ದೇಶಭಕ್ತರು. ಕಾಯಾ, ವಾಚಾ, ಮನಸಾ ಅವರು ದೇಶಸೇವೆ ಮಾಡಿದ್ದಾರೆ. ಸರ್ವಜ್ಞನ ಸಾಕಾರಮೂರ್ತಿಯಾದ ಗಾಂಧೀಜಿಯವರ ಅತ್ಯಂತ ಪ್ರಾಮಾಣಿಕ ಅನುಯಾಯಿಗಳಲ್ಲಿ ಒಬ್ಬರು. ದಯಾಮೂರ್ತಿಯೂ ಪ್ರೇಮಮೂರ್ತಿಯೂ ಆಗಿದ್ದವರು.

— ಕವಿಮಣಿ ದೇಸಿಕ ವಿನಾಯಕಮ್ ಪಿಳ್ಳೈ

ಸರಳವೂ ಸುಲಭವಾಗಿ ಎಲ್ಲರಿಗೂ ಅರ್ಥವಾಗುವಂತಹ ಶೈಲಿಯೂ, ಪಾಂಡಿತ್ಯದಿಂದ ಕೂಡಿದ್ದರೂ ಹಾಡುವವರಿಗೆ ಗಾಬರಿಯನ್ನಾಗಲಿ ತೊಡಕಿನಲ್ಲಿ ಸಿಕ್ಕಿಸದೆ, ಚಾರಿತ್ರಿಕ ನಿಜಾಂಶಗಳನ್ನು ಮರೆಮಾಚದೆ ಇರುವಂತಹ ಎಲ್ಲಾ ಗುಣಗಳ ಒಂದು ಸಮ್ಮಿಲನವೇ ನಾಮಕ್ಕಲ್ ಕವಿಗಳ ಕವಿಪ್ರತಿಭೆ.

— ಡಾ॥ ಎಂ.ಪಿ. ಶಿವಜ್ಞಾನಮ್

ನಾಮಕ್ಕಲ್ ಕವಿಯು ಒಬ್ಬ ಶ್ರೇಷ್ಠ ಕಲಾವಿದರು, ಅನೇಕ ತ್ಯಾಗಗಳನ್ನು ಮಾಡಿರುವ ಒಬ್ಬ ದೇಶಭಕ್ತ; ಸೆರೆವಾಸ ಅನುಭವಿಸಿದವರು, ನೈತಿಕವಾಗಿ ಪಾಪರಹಿತರು; ತಮ್ಮ ಸ್ನೇಹಿತರ ಅಪಾರ ಪ್ರೀತಿಯನ್ನೂ ವಿಶ್ವಾಸವನ್ನೂ ಗಳಿಸಿದವರು; ನಿಷ್ಕಳಂಕ ಹೃದಯಿ, ಹಣಕ್ಕಾಗಲೀ, ಕೀರ್ತಿಗಾಗಲಿ ಹಾತೊರೆದವರಲ್ಲ; ಆಡಂಬರವನ್ನು ಧಿಕ್ಕರಿಸಿದವರು; 'ಚರಕ ಸಂತ್ರು, ನೂಲು ತೆಗಿ' ಎಂದು ತಮಿಳುನಾಡಿನಾದ್ಯಂತ ಪ್ರಚಾರ ಮಾಡಿ ಅದರಲ್ಲಿಯೇ ಮುಳುಗಿಹೋದವರು.

— ಕಲ್ಕಿ

—o—

# ಗ್ರಂಥ ಪಟ್ಟಿ

## ಕವಿತಾ ಸಂಗ್ರಹ

1 ದೇಶಭಕ್ತಿ ಪಾಡಲ್‌ಗಳ್ (ದೇಶಭಕ್ತಿ ಗೀತೆಗಳು), ತಮಿಳ್ ಪಣ್ಣೈ, ಮಂದರಾಸಂ, 1938

2 ಪ್ರಾರ್ಥನೈ (ಪ್ರಾರ್ಥನಾ ಗೀತೆಗಳು), ತಮಿಳ್ ಪಣ್ಣೈ, ಮದರಾಸಂ, 1938

3 ತಮಿಳನ್ ಇದಯಂಮ್ (ತಮಿಳನ ಹೃದಯಂ), ತಮಿಳ್ ಪಣ್ಣೈ, ಮಂದರಾಸಂ, 1942

4 ಗಾಂಧಿ ಅಂಜಲಿ (ಗಾಂಧೀಜಿಯವರಿಗೆ ಶ್ರದ್ಧಾಂಜಲಿ), ಕವಿಞರ್ ಪತಿಪ್ಪಗಮ್, ಕೊಯಂಬತ್ತೂರಂ, 1951

5 ಸಂಕೊಲಿ (ಶಂಖನಾದ), ತಮಿಳ್ ಪುತ್ತಗ ಪಣ್ಣೈ, ಮದರಾಸಂ, 1951

6 ಕವಿತಾಂಜಲಿ, ಕವಿಞರ್ ಪತಿಪ್ಪಗಮ್, ಕೊಯಂಬತ್ತೂರಂ, 1953

7 ಮಲರ್‌ನ್ದ ಪೂಕ್ಕಳ್ (ಅರಳಿದ ಹೂವುಗಳು), ಕವಿಞರ್ ಪತಿಪ್ಪಗಮ್, ಕೊಯಂಬತ್ತೂರಂ, 1953

8 ತಮಿಳ್ ಮಣಮ್ (ತಮಿಳಿನ ಕಂಪು), ರಾಮನ್ ಪತಿಪ್ಪಗಮ್, ಮದರಾಸಂ–18

9 ತಮಿಳ್ ತೇನು (ತಮಿಳು ಜೇನು), ಇನ್ಬ ನಿಲಯಂಮ್, ಮದರಾಸು–4, 1953

10 ನಾಮಕ್ಕಲ್ ಕವಿಞರ್ ಪಾಡಲ್‌ಗಳ್ (ನಾಮಕ್ಕಲ್ ಕವಿಯ ಹಾಡುಗಳು), ಲಿಫ್ಕೊ ಅಂಡ್ ಕಂಪನಿ, ಮದರಾಸಂ, 1960

## ನೀಳ್ಗವಿತೆಗಳು

11 ಅವಳುಂಮ್ ಅವನುಂಮ್ (ಅವಳು ಮತ್ತು ಅವನು), ಪಳನಿಯಪ್ಪ ಬ್ರದರ್ಸ್, ಪೀಟರ್ಸ್ ರಸ್ತೆ, ಮಂದರಾಸಂ–14, 1953

12 ಅನ್ಬು ಸೆಯ್ದ ಅರ್ಬುದಮ್ (ಪ್ರೇಮವು ಮಾಡಿದ ಚೋದ್ಯ) ಪಳನಿಯಪ್ಪ ಬ್ರದರ್ಸ್, 1957

13 ಗಾಂಧಿ ಚರಿತ್ರ ನೊಂಡಿಚಿಂದಂ (ಗಾಂಧೀಜಿಯಂ ಕತೆ)
(ನಾಮಕ್ಕಲ್ ಕವಿಞರ್ ಪಾಡಲ್‌ಗಳಲ್ಲಿ ಸೇರಿದೆ.)

14 ಎಡುತಲೈಕ್ಕು ಎದ್ದ ಎದ್ರೈತ್ತ ವೀರರ್ ಕೂಟ್ಟಮ್ (ಸ್ವಾತಂತ್ರ್ಯ ಹೋರಾಟದ ಬೀಜ ಬಿತ್ತಿದ ವೀರರು) — ನಾಮಕ್ಕಲ್ ಕವಿಞರ್ ಪಾಡಲ್‌ಗಳಲ್ಲಿ ಸೇರಿದೆ.

15 ನಾಟ್ಟುಪ್ಪು ಕುಮ್ಮಿ (ಜಾನಪದ ಗೀತೆಗಳು)

## ಕಾದಂಬರಿಗಳು

16 ಮಲೈಕ್ಕಳ್ಳನ್, ಪಳನಿಯಪ್ಪ ಬ್ರದರ್ಸ್, 1942

17 ತಾಮರೈ ಕಣ್ಣ, ಕವಿಞರ್ ಪತಿಪ್ಪಗಮ್, ಕೊಯಂಬತ್ತೂರು, 1966

18 ಕರ್ಪಗವಲ್ಲಿ, ಕವಿಞರ್ ಪತಿಪ್ಪಗಮ್, ಕೊಯಂಬತ್ತೂರು, 1962

19 ಮರಕತವಲ್ಲಿ, ಕವಿಞರ್ ಪತಿಪ್ಪಗಮ್, ಕೊಯಂಬತ್ತೂರು, 1962

20 ಕಾದಲ್ ತಿರುಮಣಮ್, ಕವಿಞರ್ ಪತಿಪ್ಪಗಮ್, ಕೊಯಂಬತ್ತೂರು, 1962

## ನಾಟಕಗಳು

21 ಅರವಣ್ಣೈ ಸುಂದರಮ್, ವಾಸನ್ ಪ್ರೆಸ್, ನಾಮಕ್ಕಲ್, 1940

22 ಮಾಮನ್ ಮಗಳ್, ಪಳನಿಯಪ್ಪ ಬ್ರದರ್ಸ್, 1954

## ಪ್ರಬಂಧಗಳು

23 ತಮಿಳ್ ಮೊಳಿಯುಮ್, ತಮಿಳ್ ಅರಸುಮ್ (ತಮಿಳು ಭಾಷೆ ಹಾಗೂ ರಾಜ್ಯವ್ಯವಸ್ಥೆ), ಇನ್ಬ ನಿಲಯಮ್, ಮದರಾಸು–4, 1956

24 ಇಸೈ ತಮಿಳ್ (ತಮಿಳು ಸಂಗೀತ), ಇನ್ಬ ನಿಲಯಮ್, 1965

25 ತಾಯಾರ್ ಕೊಡುತ್ತ ಧನಮ್ (ತಾಯಿಯು ಕೊಟ್ಟ ಹಣ), ಜಯಮ್ ಅಂಡ್ ಕಂ, ನುಂಗಂಬಾಕ್ಕಮ್, ಮದರಾಸು, 1953

26 ಕವಿಞನ್ ಕುರಲ್ (ಕವಿವಾಣಿ), ತಮಿಳ್ ಪುಸ್ತಕ ಪಣ್ಣೈ, ಮದರಾಸು–17, 1953

27 ಕಲೈ ಇನ್ಬಮ್ (ಕಲೆಯ ಆನಂದ), ಕವಿಞರ್ ಪತಿಪ್ಪಗಮ್, ಕೊಯಂಬತ್ತೂರು, 1958

28 ತಮಿಳನ್ ಕಂಡ ಅರಸು (ತಮಿಳರು ಕಂಡ ರಾಜ್ಯ ವ್ಯವಸ್ಥೆ) ಭಾರತಿ ಪತಿಪ್ಪಗಂ, ಮದರಾಸು–17

29 ತೇಮದುರ ತಮಿಳೋಸೈ (ಜೇನ್ ಮಧುರ ತಮಿಳುವಾಣಿ), ಕವಿಞರ್ ಪತಿಪ್ಪಗಮ್, ಕೊಯಂಬತ್ತೂರು, 1957

30 ಸಂಗಿಲಿ ಕೊರವನ್, ರಾಮನ್ ಪತಿಪ್ಪಗಮ್, ಮದರಾಸು–17

31 ಆರಿಯರಾವದು ದ್ರಾವಿಡರಾವದು (ಆರ್ಯರಾರು, ದ್ರಾವಿಡರಾರು ?) ತಮಿಳ್ ಪಣ್ಣೈ, 1947

32 ಪಾರ್ಪಾನ್ ಸೂಳ್ಚ್ಚಿಯಾ? (ಬ್ರಾಹ್ಮಣ ಪಿತೂರಿಯೆ ?) ವಿನೋದನ್ ಪ್ರೆಸ್, ಮದರಾಸು, 1948

## ಅನುವಾದಗಳು

33 ಗಾಂಧೀಯ ಅರಸಿಯಲ್ (ಗಾಂಧಿಯ ರಾಜ್ಯವ್ಯವಸ್ಥೆ–ಎಸ್.ಎನ್ ಅಗರವಾಲರ ಇಂಗ್ಲಿಷ್ ಪುಸ್ತಕದ ತಮಿಳು ಅನುವಾದ), ತಮಿಳ್ ಪುತ್ತಗ ಪಣ್ಣೈ, ಮದರಾಸು, 1953

34 ಭಜಗೋವಿಂದಮ್ (ಶಂಕರರ ಸಂಸ್ಕೃತ ಪುಸ್ತಕದ ತಮಿಳು ಅನುವಾದ) ನಾಮಕ್ಕಲ್ ಕವಿಞರ್ ಪಾಡಲ್‌ಗಳಲ್ಲಿ ಸೇರಿದೆ.

35 ಸಾಂಖ್ಯ ಯೋಗ (ಭಗವದ್ಗೀತೆಯ ಒಂದು ಅಧ್ಯಾಯ ತಮಿಳಿಗೆ ಅನುವಾದ ಮಾಡಲಾಗಿದೆ) ಕವಿತಾ ಸಂಗ್ರಹದಲ್ಲಿ ಸೇರಿಸಲಾಗಿದೆ.

36 ವಾಕ್ಕು ಮೂಲಮ್ (ಗಾಂಧೀಜಿಯವರ ವಾಕ್ಯಗಳು), ಕವಿತಾ ಸಂಗ್ರಹದಲ್ಲಿ ಅಳಡಿಸಲಾಗಿದೆ.

## ಸಾಹಿತ್ಯ ವಿಮರ್ಶೆ

37 ಇಲಕ್ಕಿಯ ಇನ್ಬಮ್ (ಸಾಹಿತ್ಯ ಸವಿ), ಪಳನಿಯಪ್ಪ ಬ್ರದರ್ಸ್, ಮದರಾಸು-17, 1950

38 ತಿರುವಳ್ಳುವರುಮ್ ಪರಿಮೇಲಳಗರುಮ್, ಇನ್ಬ ನಿಲಯಮ್, ಮದರಾಸು–4, 1956

39 ತಿರುವಳ್ಳುವರ್ ತಿದುಕ್ಕಿಡುವಾರ್ (ತಿರುವಳ್ಳುವರು ಗಾಬರಿಪಡುತ್ತಾರೆ) ಇನ್ಬ ನಿಲಯಮ್, 1954

40 ವಳ್ಳುವರಿನ್ ಉಳ್ಳಮ್ (ವಳ್ಳುವರರ ಆಶಯ) ಇನ್ಬ ನಿಲಯಮ್, 1956

41 ತಿರುವಳ್ಳುವರಿನ್ ಇನ್ಬಮ್ (ತಿರುವಳ್ಳುವರು ಬೋಧಿಸಿದ ಸುಖ ಜೀವನ) ಮಂಗಳ ನೂಲಗಮ್, ನುಂಗಮ್‌ಬಾಕ್ಕಂ, ಮದರಾಸು, 1956

42 ಕಂಬರುಮ್ ವಾಲ್ಮೀಕಿಯುಮ್ (ಕಂಬರು ಮತ್ತು ವಾಲ್ಮೀಕಿ) ಇನ್ಬ ನಿಲಯಮ್, ಮದರಾಸು, 1956

43 ಗಾಂಧಿಯಡಿಗಳುಮ್ ಕಂಬನಾಟ್ಟಾಳ್ವಾರುಮ್ (ಗಾಂಧಿ ಮತ್ತು ಕಂಬರ್), ಕವಿಞರ್ ಪತಿಪ್ಪಗಂ, 1964

## ಜೀವನ ಚರಿತ್ರೆ, ಆತ್ಮಚರಿತ್ರೆ

44 ದೇಶಭಕ್ತರ್ ಮೂವರ್ (ಮೂವರು ದೇಶಭಕ್ತರು), ಇನ್ಪ ನಿಲಯಂಮ್, ಮಂದರಾಸಂ–4, 1953

45 ಎನ್ ಕತೈ (ನನ್ನ ಕತೆ), ತಮಿಳ್ ಪಣ್ಣೈ, ಮಂದರಾಸಂ–17, 1944

46 ಎನ್ ಕತೈ (ನನ್ನ ಕತೆ-ಸಾರಾಂಶ), ತಮಿಳ್ ಪಣ್ಣೈ, ಮಂದರಾಸಂ–17, 1941

## ವ್ಯಾಖ್ಯಾನ

47 ತಿರುಕ್ಕುರಳ್ ಪುದು ಉರೈ (ತಿರುಕ್ಕುರಳಿನ ಹೊಸ ವ್ಯಾಖ್ಯಾನ), ಇನ್ಪ ನಿಲಯಮ್, ಮಂದರಾಸಂ, 1954

## ಸಂಗೀತ ಕೃತಿಗಳು

48 ಕೀರ್ತನೈಗಳ್, ತಮಿಳ್ ಪಣ್ಣೈ, ಮಂದರಾಸು

49 ಗಾಂಧಿ ಭಜನೈ ತಿರಟ್ಟು, ತಮಿಳ್ ವೇದ ಪಾರಾಯಣ ಸಭಾ, ಮಂದರಾಸಂ–23, 1949

## ಅಪ್ರಕಟಿತ ಕಾದಂಬರಿ

50 ಜಯಮೇ ಜಯಮ್

## ನಾಮಕ್ಕಲ್ ಕವಿವರ್ಯರನ್ನು ಕುರಿತು

1 ವಿಡುದಲೈ ಪೋರಿಲ್ ತಮಿಳ್ ವಳರ್ನ್ದ ವರಲಾರು (ಸ್ವಾತಂತ್ರ್ಯ ಹೋರಾಟದ ಅವಧಿಯಲ್ಲಿ ತಮಿಳು ಭಾಷೆಯ ಬೆಳವಣಿಗೆಯ ಚರಿತ್ರೆ), ಎಮ್.ಪಿ. ಶಿವಜ್ಞಾನ ಗ್ರಾಮಣಿಯಾರ್, ಪುಟ. 155, ಇನ್ಪ ನಿಲಯಂಮ್, ಮಂದರಾಸಂ–4, 1970

2 ನಾಮಕ್ಕಲ್ ರಾಮಲಿಂಗಮ್ ಪಿಳ್ಳೈ ತಮಿಳ್ ಇಲಕ್ಕಿಯ ಕೊಳ್ಗೈ (ನಾಮಕ್ಕಲ್ ಕವಿವರ್ಯರ ತಮಿಳು ಸಾಹಿತ್ಯ ಆದರ್ಶ) ಸಿಲಂಬೊಲಿ ಚೆಲ್ಲಪ್ಪನ್ ಅವರು ಸಂಕಿರಣದಲ್ಲಿ ಮಂಡಿಸಿದ ಲೇಖನ, ಮಂದರಾಸಂ, 8-10-1979

3 ತಮಿಳ್ ಎಳುತ್ತಾಳರ್, ಯಾರ್, ಎವರ್ (ತಮಿಳು ಬರಹಗಾರರು ಯಾರು) ಪುಟ. 29

4 ದೇಸೀಯಮ್ ವಳರ್ತ ತಮಿಳ್, ಕೆ. ದಿರಾವಿಯಮ್, ಪು. 21-31, ಪಳನಿಯಪ್ಪ ಬ್ರದರ್ಸ್, ಮಂದರಾಸಂ, 1974

5 ಇರುಪತಾವತು ನೂರ್ರಾಂಡು ತಮಿಳ್ ಇಲಕ್ಕಿಯತ್ತಿಲ್ ಗಾಂಧೀಯತ್ತಾಕ್ಕಂ, ಪು. 166-67, ಎಮ್. ರಾಮಲಿಂಗಮ್ ಪುತ್ತಕಾಲಯಮ್, ಮದರಾಸು-5, 1973

6 ವಿ.ವಿ. ಗಿರಿ–ಕವಿತ್ತೈ ಪಿರನ್ದ ಕತೈ., ಪು. 205-12, ಸಿ.ಎಲ್.ಎಸ್. ಪಬ್ಲಿಕೇಷನ್ಸ್, ಮದರಾಸು–3, 1976

7 ಮುತ್ತಮಿಳ್ ಕವಿಞರೈ ಪರ್ರಿ ಮೂದರಿಞರ್, ಆನಂದ ವಿಕಟನ್, ಸೇಲಮ್ ಮಾವಟ್ಟ ಮಲರ್, (22–11–70)

8 ತಿರುಮತಿ ರಾಜಲಕ್ಷ್ಮಿ: "ಎನ್ ತಂದೈ", ಕಲೈಮಗಳ್, ಪು. 398–400; ಅಕ್ಟೋಬರ್, 1972

9 ಮೊಯಿನ್‌ಕಂಡರ್ 'ನಾಮಕ್ಕಲ್ ಕವಿಞರೈ ಮರಕ್ಕಲಾಮಾ', ಇಳಂತಮಿಳನ್, ವಾರಪತ್ರಿಕೆ, ಅಕ್ಟೋಬರ್, 1974

10 ಗಾಂಧೀಯಂ ಕವಿಞರೈ ಕಂಡು ವಂದೋಮ್ (ಸಂದರ್ಶನ), ಇಳಂತಮಿಳನ್, ವಾರಪತ್ರಿಕೆ, ಸೆಪ್ಟೆಂಬರ್, 1973

11 ಎಮ್. ದೇವರಾಜನ್ : 'ನಾಮಕ್ಕಲ್ ಕವಿಞರಿನ್ ನಾವನ್ಮೈ', ಲಕ್ಷ್ಮಿ ಪ್ರೆಸ್, ತಿರುಮಾದಿಪುರಮ್, 1946

## ಅಪ್ರಕಟಿತ ನಿಬಂಧಗಳು

1 ಮುಲ್ಲೈಕ್ಕಳ್ಳನ್, ಎಂ. ಲಿಟ್. ನಿಬಂಧ, ಎಮ್. ಪರಮಶಿವಮ್ ಪಚ್ಚೈಯಪ್ಪ ಕಾಲೇಜು, ಮದರಾಸು

2 ನಾಮಕ್ಕಲ್ ಕವಿಞರದು ಪಾಟಲ್‌ಗಳ್–ಒರು ತಿರನಾಯ್ವು ಪಿಎಚ್.ಡಿ. ನಿಬಂಧ, ಮುತ್ತುಸ್ವಾಮಿ, ವೆಂಕಟೇಶ್ವರ ವಿ.ವಿ., ತಿರುಪತಿ

3 'ವಿಡುತಲೈ ಬೋರಿಲ್ ನಾಮಕ್ಕಲ್ ಕವಿಞರ್' ಎಂ. ಲಿಟ್. ನಿಬಂಧ, ಕು|| ಕೋಮಲವಲ್ಲಿ, ನಾಮಕ್ಕಲ್

4 'ನಾಮಕ್ಕಲ್ ಕವಿಞರದು ಪಡೈಪ್ಪುಗಳ್–ಒರು ತಿರಳಾಯ್ವು', ಪಿಎಚ್.ಡಿ. ನಿಬಂಧ, ಡಾ|| ಕಸ್ತೂರಿ, ಮದುರೈ ಕಾಮರಾಜ ವಿ.ವಿ.

—o—